# ಪಂಚಮ

ಸಂಪುಟ: ೧ ಪಾಕ್ಷಿಕ ಬೆಲೆ: ೨೦ ಪೈಸೆ ೭-೩-೧೯೭೬ ಸಂಚಿಕೆ: ೧

# ಕಂಚನಹಳ್ಳೀಲಿ ಆಗುತ್ತಿರುವುದೇನು ?

[ ವರದಿ : ಸಿದ್ಧಲಿಂಗಯ್ಯ ]

ಕಂಚನಹಳ್ಳಿಗೆ ಹೋದಾಗ ಉರಿಬಿಸಿಲು. ರಸ್ತೆಗಳಿಲ್ಲ ಸೀಳು ದಾರಿಗಳಲ್ಲೇ ಆ ಹಳ್ಳಿಗೆ ಹೋಗಬೇಕು. ಮಳವಳ್ಳಿಗೆ ಹತ್ತಿರವಿದೆ. ಐನೂರು ಸವರ್ಣೀಯರ ಮನೆಗಳಿವೆ. ಹರಿಜನರು ೩೫ ಕುಟುಂಬಗಳಿದ್ದಾರೆ. ಸೋಂಪುಲು, ಗಲ್ಲಿಗಳೇ ಈ ಊರಿನ ಹರಿಜನರ ಕೇರಿಗೆ ರಾಜಮಾರ್ಗ. ನಾನು ಅಲ್ಲಿಗ ಹೋದಾಗ ಜನ ಹೆದರಿದ್ದರು, ಆಶ್ಚರ್ಯಬಿದ್ದರು. ಒಬ್ಬೊಬ್ಬರೇ ಸಂಕೋಚದಿಂದ ಬಂದು ಕೆಳಗೆ ಕೂತರು. ಅಲ್ಲೇ ನಿಂತಿದ್ದ ಹೆಂಗಸರು ಮಕ್ಕಳನ್ನು ವಯಸ್ಸಾದ ಮುದುಕರು ಗದರಿಸಿ ಕಳಿಸಿದರು.

## ಹೊಲ ಬಿಡಿಸಿದರು

ಬಹಳ ವರ್ಷದಿಂದ ಹಲಗೂರು ಸಾಮ್ರಾಣಿ ಸಾವುಕಾರರ ಜಮೀನನ್ನು ಹರಿಜನರು ಪಾಲಿಗೆ ಮಾಡುತ್ತಿದ್ದರು. ಭೂಸುಧಾರಣೆ ಸೂಚನೆಯನ್ನರಿತ ಸಾವುಕಾರರು "ನಾವು ಕೇವಲ ಕೂಲಿ ಮಾಡುತ್ತಿದ್ದೇವೆಂದು" ಹೆದರಿಸಿ ಇವರಿಂದ ರುಜು ಹಾಕಿಸಿಕೊಂಡರು. ಹರಿಜನರನ್ನು ವಂಚಿಸಲು ಹೀಗೆ ನೆರವಾದ ಊರಿನ ಮುಖಂಡನಿಗೆ ಸಾವುಕಾರರು ಒಂದೂಕಾಲು ಎಕರೆ ಗದ್ದೆಯನ್ನು ಬಕ್ಷೀಸುಕೊಟ್ಟರು. ಹರಿಜನರನ್ನು ಜಮೀನು ಬಿಡಿಸಿದರು. ಈಗ ಕೂಲಿ ಕೆಲಸ. "ನಾನು ೩೦ ವರ್ಷದಿಂದ ಆ ಜಮೀನು ಮಾಡ್ತಿದ್ದೆ ಸ್ವಾಮಿ" ಇದು ಗೇಣಿದಾರತನವನ್ನು ಕಳೆದುಕೊಂಡ ಹೊಟ್ಟೆ ಜವರಯ್ಯನ ಮಾತು.

## ಉಳಕ್ಕೆ ಎತ್ತು ಇರಲಿಲ್ಲ

ನಾಲ್ಕು ಜನ ಹರಿಜನರು ಎರಡೂಕಾಲು ಎಕರೆ ಭೂಮಿಯನ್ನು ಸಾಗುವಳಿ ಮಾಡುತ್ತಿದ್ದರು. ಇವರ ಹತ್ತಿರ ಎತ್ತುಗಳಿಲ್ಲ. ಸವರ್ಣೀಯರಾದ ಸಿಂಗಯ್ಯ ಮತ್ತು ತಮ್ಮಯ್ಯನಿಗೆ ೨೦೦ ರೂ. ಕೊಟ್ಟು ಎತ್ತಿನಿಂದ ಉಳಿಸಿದರು. ಸವರ್ಣೀಯರು ಮಾಡಿದ್ದು ಅಷ್ಟೆ. ಈ ನಾಲ್ಕು ಸಂಸಾರದ ಜನ ಕಳೆ ಕಿತ್ತರು, ನಾಟಿ ಹಾಕಿದರು, ಉಪ್ಪು ಬೂದಿ ಹಾಕಿದರು, ಎಲ್ಲ ಮಾಡಿದರು. ಇವರ ಜಮೀನಿನಲ್ಲಿ ದುಡಿಮೆ ಮಾಡಿದರು. ಕೊನೆಗೆ ಬೆಳೆ ನಿಂತಿತು.

## ದಕ್ಕಿದ್ದು ಬೆಳೆ ಅಲ್ಲ—ಏಟು

ಹರಿಜನರು ಫಸಲು ಕೊಯ್ಯಲು ಹೋದಾಗ ಸವರ್ಣೀಯರ ಒಂದು ದೊಡ್ಡ ಪಡೆ ಬಂದು ಅಡ್ಡಗಟ್ಟಿತು. ಮೂರು-ನಾಲ್ಕು ಜನರನ್ನು ಅವರು ದೊಣ್ಣೆಗಳಿಂದ ಹೊಡೆದರು. 'ಲೇ ಹೊಲೇರ ನಿಮ್ಮ ಗೌರ್ನಮೆಂಟು ಬೆಂಗ್ಳೂರಿಂದ ಇಲ್ಗೆ ಬರೋದ್ರೊಳ್ಗೆ ನಾವೇ ಇಲ್ಲಿ ಸರಿಗಟ್ತೀವಿ' ಎನ್ನುತ್ತಾ ಜವರಯ್ಯ ಒಬ್ಬನನ್ನು ಹತ್ತು ಜನ ಸೇರಿ ಹೊಡೆದರು. ಅಲ್ಪಸಂಖ್ಯಾತ ಹರಿಜನರು ಓಡಿಹೋದರು. ಬೆಳೆಗೆ ಬಂದವರು ಗದ್ದೆಯಲ್ಲಿ ಏಟು ತಿಂದರು.

## ಪೆಟ್ರೋಲ್ ಹಾಕಿ ಸುಡ್ತೀವಿ

ಹೊಲಗೇರಿಯಲ್ಲಿ ಭಯ ಸುಳಿದಾಡಿತು. ದಲಿತರು ಕಂಗಾಲಾದರು. ಪೋಲೀಸರಿಗೆ ಸುದ್ದಿ ತಿಳಿಸಬೇಕು, ೧೦ ಮೈಲಿ ದೂರದ ಸಾತನೂರಿಗೆ ಹೋಗಬೇಕು, ಹಣಬೇಕು. ಮೇಲು ಜಾತಿಯ ಹಣವಂತರು ತಮ್ಮೂರಿನಲ್ಲಿ ಖಾಸಗಿಯಾದ ಪೊಲೀಸ್ ಸ್ಟೇಷನ್, ಕೋರ್ಟು ಮಾಡಿಕೊಂಡಿದ್ದಾರೆ. ಆದರೆ ಇದರಲ್ಲಿ ಹರಿಜನರಿಗೆ ನಂಬಿಕೆ ಹೇಗೆ ಬರುತ್ತದೆ? ಹೇಗೋ ಹೋಗಿ ಸಬ್‌ಇನ್ಸ್‌ಪೆಕ್ಟರಿಗೆ ದೂರು ಕೊಟ್ಟರು. ಅವರೂ ಮೇಲು ಜಾತಿ. ಭೀತಿಗೊಂಡ ಹರಿಜನರಿಗೆ ಆತ ಆಶ್ವಾಸನೆ ಕೊಟ್ಟರೀತಿ 'ಲೇ ನಿಮ್ಮ ಜನಾನ ಅರೆಸ್ಟ್ ಮಾಡ್ತಿನಿ' ಹುಷಾರಾಗಿರಬೇಕೆಂಬ ಪಾಠ.

## ಬೆಳೆಯದವರು ಬೆಳೆ ತಿಂದರು

ಸೀಜು ಮಾಡಿದ ಭತ್ತವನ್ನು ಸವರ್ಣೀಯರು ಹಿಂಸೆಯಿಂದ ಕಟಾವು ಮಾಡಿಕೊಂಡರು. ಹರಿಜನರು ಏನೂ ಮಾಡುವಂತಿಲ್ಲ. ಪೋಲೀಸರೂ ಏನೂ ಮಾಡಲಿಲ್ಲ. ಹರಿಜನರ ದೂರಿಗೆ ಕಿವುಡು ಪ್ರತಿಕ್ರಿಯೆ ಸಿಕ್ಕಿತು. ಸವರ್ಣೀಯರು ಭತ್ತವನ್ನು ಬಡಿದು ಹರಿಜನ ಕೇರಿಯ ಮುಂದೆಯೇ ತೆಗೆದುಕೊಂಡು ಹೋದರು.

## ಎರಡೂಕಾಲು ಎಕರೆಗಾಗಿ

೪ ಜನ ಹರಿಜನರು ಎರಡೂ ಕಾಲು ಎಕರೆಯನ್ನು ಹಂಚಿಕೊಂಡು ಸಾಗುವಳಿ ಮಾಡುತ್ತಿದ್ದಾರೆ. ಈ ಜಮೀನಿನ ಸುತ್ತ ಸವರ್ಣೀಯರ ಜಮೀನು. ಹರಿಜನರ ಜಮೀನೂ ಅವರಿಗೆ ದಕ್ಕಿದರೆ ಅವರಿಗೆ ಹೆಚ್ಚು ಅನುಕೂಲ. ಅದಕ್ಕಾಗಿ ಜಮೀನುಳ್ಳವರ ನಿರಂತರ ಪ್ರಯತ್ನ ನಡೆದಿದೆ. ಇದು ಹೋದರೆ ಆ ನಾಲ್ಕು ಸಂಸಾರಗಳ ಗತಿ ಏನು ?

## ಕುಡಿಯುವ ನೀರಿಗೆ ಕಕ್ಕಸ್ಸು

ಇಲ್ಲಿ ಒಂದು ಅನ್ಯಾಯ ಪುರಾವೇ ಇದೆ. ಒಮ್ಮೆ ದಲಿತರು ಮತ್ತು ಸವರ್ಣೀಯರ ನಡುವೆ ಘರ್ಷಣೆ ನಡೆಯಿತು. ಇದು ಆದದ್ದು ರಾತ್ರಿ. ಬೆಳಗ್ಗೆ ಹರಿಜನರ ಕೇರಿಯಲ್ಲಿರುವ ಒಂದೇ ಒಂದು ಕುಡಿಯುವ ಸಿಹಿ ನೀರಿನ ಬಾವಿಯಲ್ಲಿ ಮಂಕರಿ ಕಕ್ಕಸ್ಸು ತುಂಬಿತ್ತು. ಇಂಥವರನ್ನು ಹರಿಜನರು ತಮ್ಮ ರಕ್ಷಕರೆಂದು ಹೇಗೆ ಭಾವಿಸುತ್ತಾರೆ?

## ಹಬ್ಬದ ಕಿಚ್ಚು—ಬಹಿಷ್ಕಾರ

ಈ ಬೆಳವಣಿಗೆಯ ಆರಂಭ ಇಲ್ಲಿಗೆ ಎರಡು ವರ್ಷದ ಹಿಂದೆ. ಸಂಕ್ರಾಂತಿ ಹಬ್ಬ. ಕಿಚ್ಚು ಹಾಯಿಸಿಕೊಂಡು ಬಂದ ಹರಿಜನರು ತಮ್ಮ ಕೇರಿಯಲ್ಲಿ ದನಗಳನ್ನು ಮೆರವಣಿಗೆ ಮಾಡಿಕೊಳ್ಳುತ್ತಿದ್ದರು. ಸವರ್ಣೀಯರಿಗೆ ಇದು ಅಸಹನೀಯವಾಯಿತು. ಅವರು ಇದು ಬೇಡವೆಂದರೂ ಹರಿಜನರು ಒಪ್ಪಲಿಲ್ಲ. ಘರ್ಷಣೆ ಶುರುವಾಯಿತು. ಯಜಮಾನರಿಗೆ ತಗ್ಗಿ ನಡೆಯದ ಈ ಸ್ವಾಭಿಮಾನಿಗಳಿಗೆ ಅಂಗಡಿ, ಕ್ಷೌರ ಇತ್ಯಾದಿಗಳಿಂದ ಏಳು ಹಳ್ಳಿಯ ಜನ ಬಹಿಷ್ಕಾರ ಹಾಕಿದರು.

## ವಲಸೆಹೋದರೂ ಬೆಂಕಿ

ತಲೆಯೆತ್ತಿದರೆ ಏಟು, ಜೀವನವೇ ಕಠಿಣವಾಯಿತು. ಕೊನೆಗೆ ಹರಿಜನರು ಊರು ಬಿಡುವ ನಿರ್ಧಾರ ಮಾಡಿದರು. ಒಂದು ದಿನ ಅವರೆಲ್ಲಾ ತಮ್ಮ ಜೋಪಡಿಗಳನ್ನು ತೊರೆದು ಧನಗೂರು ಹೊಸಹಳ್ಳಿಗೆ ಬಂದರು. ಗುಡಿಸಲುಗಳನ್ನು ಸಿದ್ಧಪಡಿಸಿದರು. ಇದ್ದಕ್ಕಿದ್ದಂತೆ ಗುಡಿಸಲುಗಳಿಗೆ ಬೆಂಕಿ ಬಿತ್ತು. ವಲಸೆಯೂ ವಿಫಲವಾಯಿತು. ಸವರ್ಣೀಯರ ಕೈವಾಡ ಬೆಳಕಿನಷ್ಟು ಗೋಚರಿಸುತ್ತಿತ್ತು. ಹರಿಜನರಿಗೂ ಅವರನ್ನು ಶೋಷಿಸುವ ಮೇಲು ವರ್ಗದವರಿಗೂ ವಿಷಪೂರಿತ ತಾಯಿ ಮಕ್ಕಳ ಸಂಬಂಧವಿದೆ. ಹರಿಜನರು ದೂರಹೋದರೂ ಅವರು ಸಹಿಸುವುದಿಲ್ಲ. ಯಾಕೆಂದರೆ ದುಡಿಯುವವರು ಯಾರು? ಆದ್ದರಿಂದ ಹತ್ತಿರದಲ್ಲೇ ಇರಿಸಿಕೊಳ್ಳುತ್ತಾರೆ ಹರಿಜನರು ಮರಳಿ ಹಳ್ಳಿಗೆ ಬಂದರು.

(ಎರಡನೇ ಪುಟ, ನೋಡಿ)

ಪ್ರಿಯರೇ,

ಖಾಸಗಿ ಪ್ರಸಾರಕ್ಕಾಗಿ ಪ್ರಕಟವಾಗುತ್ತಿದ್ದ 'ಶೋಷಿತ' ಇದೀಗ 'ಪಂಚಮ' ಹೆಸರಿನಲ್ಲಿ ಅಂಗೀಕೃತವಾಗಿ ಹೊರಬಂದಿದೆ.

* ಇದು ಯಾವ ರಾಜಕೀಯ ಪಕ್ಷಕ್ಕೂ ಬದ್ಧವಾಗಿಲ್ಲ.
* ಎಲ್ಲ ಬಗೆಯ ಆರ್ಥಿಕ, ಧಾರ್ಮಿಕ, ಸಾಮಾಜಿಕ, ಬೌದ್ಧಿಕ ದಬ್ಬಾಳಿಕೆಯ ವಿರುದ್ಧ, ಶೋಷಣೆಯ ವಿರುದ್ಧ ದಲಿತರಲ್ಲಿ ಪ್ರಜ್ಞೆ ಮೂಡಿಸಲು ಪ್ರಯತ್ನಿಸುತ್ತದೆ.
* ದಲಿತರು ತಮ್ಮ ಬಗ್ಗೆ ಮತ್ತು ಸಮಾಜದ ಬಗ್ಗೆ ವೈಜ್ಞಾನಿಕವಾಗಿ ವಿವೇಚಿಸುವಂತೆ ಮಾಡುವ ಉದ್ದೇಶ ಇಟ್ಟುಕೊಂಡಿದೆ.
* ವಿವಿಧ ವಿಚಾರಧಾರೆಗಳನ್ನೂ, ಸಿದ್ಧಾಂತಗಳನ್ನೂ ದಲಿತರಿಗೆ ತಲುಪಿಸಿ ವಿಚಾರಶೀಲರನ್ನಾಗಿಸಲು ಪ್ರಯತ್ನಿಸುತ್ತದೆ.
* ದಲಿತರ ಮೂಲಭೂತ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ರಚನಾತ್ಮಕವಾಗಿ ಅವರು ಕ್ರಿಯಾಶೀಲರಾಗಲು ಶ್ರಮಿಸುತ್ತದೆ.

ಇದಕ್ಕೆಲ್ಲ ತಮ್ಮ ಸಹಕಾರ, ಬೆಂಬಲ, ಸಲಹೆಗಳು ಅವಶ್ಯ.

೭-೩-೧೯೭೬ —ಸಂಪಾದಕ

# ಕಾನೂನು ಯಾರಿಗಾಗಿ?

ಮೂಡಲ ಪ್ರಾಂತ್ಯದಲ್ಲಿ ಅದರಲ್ಲೂ ಚಾಮರಾಜನಗರ, ಗುಂಡ್ಲುಪೇಟೆ ಮತ್ತು ಹೆಗ್ಗಡದೇವನ ಕೋಟೆಯ ತಾಲ್ಲೂಕುಗಳಲ್ಲಿನ ಹಳ್ಳಿಗಳಲ್ಲಿ ತುಳಿತಕ್ಕೆ ಸಿಕ್ಕ ಯಾರ ಪರವಾಗಿ ಕಾನೂನು ಬಂದರೂ ಅದು ನಡೆದೇ ತೀರುತ್ತೆ ಅಂತ ಹೇಳೋಕ್ಕಾಗೊಲ್ಲ ಮತ್ತು ಕೆಲವು ಸಾರಿ ಕಾನೂನು ತಿಪ್ಪರಲಾಗ ಹಾಕುವುದೂ ಉಂಟು. ಇತ್ತಲಾಗಿರುವ ನೂರಾರು ಸಹುಸ್ಸಿಗಳಲ್ಲಿ 24ನೇ ಫೆಬ್ರವರಿ 76 ರಂದು ನಡೆದ ಒಂದು ಘಟನೆಯ ತಿಳಿಯಬೇಕು.

ಚಾಮರಾಜನಗರ ತಾಲ್ಲೂಕು ಅರಂಲವಾಡಿ ಗ್ರಾಮದಲ್ಲಿ ನೂರಕ್ಕೂ ಮಿಕ್ಕ ಹರಿಜನರ ಮನೆಗಳಿವೆ. ಅಲ್ಲಿ ಜವರಯ್ಯ ಎಂಬುವವ ಒಬ್ಬ. ಹತ್ತನ್ನೆರಡು ವರ್ಷಗಳ ಹಿಂದೆ ಒಳ್ಳೆ ಕುಳ ಅನ್ನಿಸಿಕೊಂಡಿದ್ದವ ಈಗ ಯಾವ್ಯಾವುದೊ ಕಾರಣಕ್ಕಾಗಿ ಮತ್ತೆ ಪಾಪರಾಗುವ ಗತಿ ಬಂದಿದೆ. ಇವನಿಗೆ 45ನೇ ಸರ್ವೆ ನಂಬರಿನಲ್ಲಿ 4 ಎಕರೆಯ ತೋಟ ಉಂಟು. ಅದನ್ನು ಸುಮಾರು ಐದಾರು ವರ್ಷಗಳ ಕೆಳಗೆ ಅದೇ ಊರಿನ ಬಸಪ್ಪನ ಮಗ ಶಂಕರಪ್ಪ ಎಂಬುವವನಿಗೆ 2000 ರೂಪಾಯಿಗಳನ್ನು ತೆಗೆದುಕೊಂಡ ಭೋಗ್ಯವಾಡಲಾಗಿತ್ತು. ಹಾಗಿದ್ದರೂ ಆ ತೋಟವನ್ನು ಜವರಯ್ಯನೇ ನೋಡಿಕೊಳ್ಳುತ್ತಿದ್ದು ವರ್ಷಕೆ ಇಂತಿಷ್ಟು ಅಂತ ಬಸಪ್ಪನಿಗೆ ಆದಾಯ ಕೊಡುತ್ತಿದ್ದ. ಇತ್ತೀಚಿನ ಕೆಲವು ದಿನಗಳಲ್ಲಿ ಬಸಪ್ಪ 'ನನಗೆ ನನ್ನ ಹಣ ಮತ್ತು ಬಡ್ಡಿ ಕೊಡು, ಇಲ್ಲವಾದರೆ ತೋಟ ನನಗೇ ಬಿಡು' ಎಂದು ಹೇಳಿದ್ದಕ್ಕೆ 'ನನಗೆ ಒಂದಿಷ್ಟು ವಾಯಿದೆ ಕೊಡಿ ನಾನು ತೀರಿಸುತ್ತೇನೆ' ಎಂದು ಜವರಯ್ಯ ಉತ್ತರಿಸಿದ. ಹೀಗೇಳಿ ಜವರಯ್ಯ ತೋಟದ ಕಡೆಗೆ ಹೋಗೋದರ ಒಳಗೆ ಅಲ್ಲಿ ಒಬ್ಬ ಕಾಯಿಕಿತ್ತು ಗುಡ್ಡೆ ಹಾಕಿದ್ದ. ಕೇಳಿದ್ದಕ್ಕೆ 'ನನ್ನ ಶಂಕರಪ್ಪನೇ ಕಳಿಸಿದ' ಅಂತ ಹೇಳಿ ಹೊರಟೋದ ಆ ಮನುಷ್ಯ ಕಿತ್ತಿಟ್ಟಿದ್ದ ಕಾಯಿಯನ್ನೆಲ್ಲಾ ಗುಡ್ಡೆ ಸೇರಿಸಿ ತಮ್ಮನೆಗೆತೆಗೆದುಕೊಂಡು ಬಂದ ಜವರಯ್ಯ. ಶಂಕರಪ್ಪನ ಮಕ್ಕಳಾದ ಗುರುಲಿಂಗಪ್ಪ, ನಂಜಪ್ಪ, ಸಿದ್ದಪ್ಪ ಮತ್ತು ಅವರ ಸಂಬಂಧಿಕ ನಾಗಪ್ಪ ಇವರೆಲ್ಲ ಬಂದು ಜವರಯ್ಯ ಮತ್ತು ಅತನ ಮಗ ವೆಂಕಟಯ್ಯ (೩೦) ಇವರನ್ನು ಮನೆಯಿಂದ ಈಚೆಗೆಳೆದು ಒದೆದು,ಬಾಯಿಗೆ ಬಂದಂತೆ ಬಯ್ದಿದ್ದಾರೆ......'ಬಡ್ಡಿಮಕ್ಕಳೆ ನಿಮ್ಮ ಹರಿಜನರಿಗೆ ಕೊಬ್ಬು, ಅಹಂಕಾರ ಜಾಸ್ತಿಯಾಗಿದೆ, ನಿಮಗೆಲ್ಲ ಸರ್ಕಾರದವರು ಅದೇನ್ ಮಾಡಾರು ನಾವು ನೋಡ್ತಿವಿ' ಎಂದು ತಂದ ಕಾಯಿಯನ್ನೆಲ್ಲಾ ತೆಗೆದುಕೊಂಡು ಹೋಗಿರುವ ಸಂಗತಿ ತಿಳಿದಿದೆ. (ಈ ರೀತಿ ಯಾಕೆ ಬಯ್ಯುತ್ತಾರೆ ಅಂದರೆ ಈಗಿನ ಯಾವ ಕಾನೂನು ಬಂದರೂ ಅದು ಕೇವಲ ಹರಿಜನ ಉದ್ಧಾರಕ್ಕಾಗಿ ಮಿಕ್ಕವರಿಗಲ್ಲ ಎಂಬ ಮನೋಭಾವ ಇತ್ತ ಕಡೆಯ ಕೆಲವು ಜನರ ತಿಳುವಳಿಕೆ).

ಜವರಯ್ಯ ಮತ್ತು ಅತನ ಮಗ ಚಾಮರಾಜನಗರದ ಪೊಲೀಸ್ ಇಲಾಖೆಯ ಮುಖ್ಯಸ್ಥರಿಗೆ ದೂರುಕೊಟ್ಟದ್ದೂ, ಆ ಅಧಿಕಾರಿಗಳು ಕಳಿಸಿದ ಎರಡು ಜನ ಪೊಲೀಸರು ಬಂದು ಶಂಕರಪ್ಪನ ಸಹಿ ತೆಗೆದುಕೊಂಡೋದದ್ದೂ, ನಿಗದಿಮಾಡಿದ ದಿವಸ ಶಂಕರಪ್ಪ ಬಾರದಿದ್ದದ್ದೂ, ಮತ್ತೆ ಜವರಯ್ಯ ಅಧಿಕಾರಿಗಳಲ್ಲಿಗೆ ಹೋಗಿ ಗೋಗರೆದರೂ, ಮಂಡಿಯೂರಿ ಸಲಾಮು ಮಾಡಿದರೂ ಏನೂ ಪ್ರಯೋಜನವಾಗದಿರುವ ವಿಚಾರ ಗೊತ್ತಾಗಿದೆ ಹಾಗೂ ಈವತ್ತೂ ಅಪ್ಪ, ಮಗ ಇಬ್ಬರೂ ತಾಲ್ಲೂಕಿನ ಮುಖ್ಯ ಕಛೇರಿಗಳಿಗೆ ಅಲೆಯುತ್ತಿರುವುದು ಕರುಳು ಮಿಡಿವ ಕತೆಯಾಗಿದೆ.

ಇಂಥ ವಿಚಾರಗಳ ತಿಳಿದಾಗ ಹಣ, ಶಕ್ತಿ, ಯುಕ್ತಿಗಳಿಂದ ಶೋಷಕರಾಗಿರುವವರನ್ನು ಮಟ್ಟಹಾಕಲು ಯಾವ ತರದ ಬಿಗಿ ಕಾನೂನು ಬಂದರೂ ಅದನ್ನು ಪಾಲಿಸುವ ಅಧಿಕಾರಿಗಳನ್ನೂ ಅವಲಂಬಿಸಿದೆ ಅನಿಸುವುದಿಲ್ಲವೆ?

---

ಬೆ. ಫೆ 4. ರಾಜ್ಯದಲ್ಲಿ ಕಳೆದ ವರ್ಷ ಹರಿಜನರ ಮೇಲೆ ನಡೆದ ದೌರ್ಜನ್ಯಗಳು ಒಟ್ಟು 1695. ಎರಡು ಪ್ರಕರಣಗಳಲ್ಲಿ ಮಾತ್ರ ಅಪಾದಿತರಿಗೆ ಜೈಲು ಶಿಕ್ಷೆ ವಿಧಿಸಲಾಗಿದೆ. ಈ ಸಂಬಂಧದಲ್ಲಿ ರಚಿತವಾಗಿರುವ ವಿಶೇಷ ಪೊಲೀಸ್ ಸೆಲ್ ಒಟ್ಟು 560 ಪ್ರಕರಣಗಳ ಬಗ್ಗೆ ವರದಿ ತರಿಸಿ ಮೊಕದ್ದಮೆ ಹೂಡಿತ್ತು. ಅವುಗಳಲ್ಲಿ 103 ಪ್ರಕರಣಗಳಲ್ಲಿ ತಪ್ಪಿತಸ್ಥರೆಂದು ತೀರ್ಮಾನವಾಗಿ 82 ಪ್ರಕರಣಗಳಲ್ಲಿ ಜುಲ್ಮಾನೆ ವಿಧಿಸಲಾಯಿತು. 16 ಪ್ರಕರಣಗಳಲ್ಲಿ ರಾಜಿ ಒಪ್ಪಂದವಾಯಿತು. ವಿಧಾನ ಸಭೆಯಲ್ಲಿ ಈ ಬಗ್ಗೆ ಮುಖ್ಯಮಂತ್ರಿಯವರು ಪ್ರಶ್ನೆಯೊಂದಕ್ಕೆ ಉತ್ತರಿಸಿದರು.

ತಾ॥ 5-2-76 ಪ್ರಜಾವಾಣಿ

---



---

## ದಲಿತ ನುಡಿ

ನಮ್ಮನ್ನು ಮರೆಯುವ ಸವರ್ಣೀಯ ನಾಯಕನನ್ನು ಒಂದು ಪಕ್ಷ ಕ್ಷಮಿಸುತ್ತೇನೆ. ಆದರೆ ನಮ್ಮಲ್ಲೇ ಹುಟ್ಟಿ, ನಮ್ಮ ನೋವನ್ನೇ ಅನುಭವಿಸಿ, ನಮ್ಮ ಹೆಸರೇಳಿ ನಾಯಕನಾಗಿ, ಕೊನೆಗೆ ನಮ್ಮನ್ನೇ ಮರೆಯುವ ಆ ಕರಿಯ ನಾಯಕನನ್ನು ನಾನೆಂದೂ ಕ್ಷಮಿಸಲಾರೆ.

—ರುದ್ರಪ್ಪ

---

( ಮೊದಲ ಪುಟದಿಂದ )

### ಹಳ್ಳಿಯ ಪಾಳೇಗಾರರು

ಸುಮಾರಾಗಿ ಇಂಗ್ಲೀಷ್ ಪದಗಳನ್ನು ಉಚ್ಚರಿಸಲು ಬರುವ ಭೀಮೇಗೌಡರು, ಬಸವೇಗೌಡರು ಉರುಫ್ ಕರಿಯಪ್ಪ ಇಲ್ಲಿಯ ಪಾಳೇಗಾರರು. ಹರಿಜನರು ಇವರ ಮನೆಗೆ ಜೀತಕ್ಕೆ ಬರದಿರುವುದರಿಂದ ಅವರ ಮೇಲೆ ಸೇಡು ಹಳ್ಳಿಯಿಂದ ದಿಲ್ಲಿಯವರೆಗೆ ಇವರ ಮಾತು ನಡೆಯುವುದೆಂಬ ನಂಬಿಕೆ ಜನರಲ್ಲಿ ಭಯಕ್ಕೆ ಕಾರಣ. ಮೊದಲು ಮನೆಗೊಂದು ಆಳು ಇವರ ಮನೆಗೆ ಹೋಗಿ ಬಿಟ್ಟಿಗೆಯ್ಯುತ್ತಿದ್ದರು. ಈಗ ಇಲ್ಲ. ಆದ್ದರಿಂದ ಇವರು ಹರಿಜನ ವಿರೋಧಿ 'ಹತ್ತು ಸಾವ್ರ ಕರ್ಚಾಗ್ಲಿ ಕೇಸ್ ನಡುಸ್ತೀನಿ.'

ಇವರ ಛಲ ಅಕಾಶದಗಲ. ಕನಿಖೆಮಾಡಲು ಬರುವ ಸರ್ಕಾರದ ಕಡೆಯ ಜನ, ಈ ಪಾಳೇಗಾರರ ಮನೆಯಲ್ಲಿ ಕೋಳಿಬಾಡಿನ ಸಾರಿನಲ್ಲಿ ಉಂಡು, ಎಳನೀರು ಕುಡಿದು, ಲೋಕಾಭಿರಾಮವಾಗಿ ಇವರ ಪಡಸಾಲೆಯಲ್ಲಿ ಕೂತು ಮಾತಾಡುತ್ತಾರೆ. ಹರಿಜನರನ್ನು ಅಲ್ಲಿಗೇ ಕರೆಸಿ ಅವರಿಗೆ ಬುದ್ಧಿ ಹೇಳಿ ಉಣ್ಣಿಸಿದವರ ಪರ ನಿರ್ಣಯ ಮಾಡಿ ಹೋಗುತ್ತಾರೆ. ಹೀಗೆ ಹರಿಜನರು ಕೊಟ್ಟ ಕಂಪ್ಲೇಂಟು ಒಂದೂ ಗೆಲ್ಲುವುದಿಲ್ಲ. ಇದು ತನಿಖೆಯ ರೂಪ.

### ಅಂದರೇನಪ್ಪ?

ಈ ಜನಕ್ಕೆ ಸರ್ಕಾರದೊಡನೆ ಸಂಬಂಧ ಕಂಡಾಯದ ಮೂಲಕ (ಇವರು ಕೊಟ್ಟವರು; ಎಂದೂ ಕೈಚಾಚಿದವರಲ್ಲ) ಸರ್ಕಾರದ ಯಾವ ಸೌಕರ್ಯವೂ ಇವರಿಗೆ ದಕ್ಕದಂತೆ ಬಲವಾದ ಉಸ್ತುವಾರಿ ಇದೆ. ಸೈಟು, ಮನೆಕಟ್ಟುವ ಸಲಕರಣೆ ಏನೂ ಸಿಕ್ಕಿಲ್ಲ ಇದಕ್ಕಾಗಿ ಇದಕ್ಕಾಗಿ ಕೊಟ್ಟ ನೂರಾರು ಅರ್ಜಿಗಳು ನೀರುಪಾಲು 'ವೃದ್ಧಾಪ್ಯ ವೇತನ ಅಂದರೇನಪ್ಪ?' ಸಾಯುವಂತಿರುವ ಅಜ್ಜನ ಕುತೂಹಲದ ಪ್ರಶ್ನೆ ಇದು.

### ಕತ್ತಲೆಯ ದಾರಿ ದೂರ

ಇವು ಯಾವು ಇಲ್ಲದಿದ್ದರೂ ಜಮೀನುದಾರರಿಂದ ಏದೆತ, ಭೂಮಿ ಕಿತ್ತುಕೊಳ್ಳುವುದು, ಸುಳ್ಳು ಅರ್ಜಿಗೆ ರುಜು ಹಾಕಿಸಿಕೊಳ್ಳುವುದು ಮಾತ್ರ ನಿರಂತರ ನಡೆಯುತ್ತಿದೆ ರಾತ್ರಿ ಹೊತ್ತು ಫರ್ಷನ್ ಆದರೆ ಸಾತನೂರಿಗೆ ದೂರು ಕೊಡಬೇಕು ಹಳ್ಳಕೊಳ್ಳ ಬಿದ್ದು ಹತ್ತು ಮೈಲಿ ಹೋಗಬೇಕು ಥಿಕ್ಕಿ ಹೊಡೆಯುವ ಕತ್ತಲೆಯನ್ನು ಸೀಳಬೇಕು ಹಳ್ಳಿಯ ಹರಿಜನರ ಬದುಕು ತ್ರಿಶಂಕು ಕತ್ತಲೆ ದಾರಿ ದೂರ.

# ಜೀತಮುಕ್ತನ ಕುರಿತು..

ಬೆಂಗಳೂರು ಜಿಲ್ಲೆಯ ಆನೇಕಲ್ಲಿನ ಅರಸು ಕುಲದವರೊಂದಿಗೆ ಜೀತದ ಬಗ್ಗೆ ನಡೆದ ಮಾತುಕತೆಗಳು ಹೀಗಿವೆ:

ಪ್ರಶ್ನೆ: ಜೀತ ಪದ್ಧತಿ ರದ್ದು ಮಾಡಿದ್ದರ ಬಗ್ಗೆ ಏನೇಳುತ್ತೀರಿ? ಅಂದಾಗ—

'ಅಯ್ಯೋ, ಅದೊಂದು ದೊಡ್ಡ ಕತೆ' ಎಂದು ಪ್ರಾರಂಭಿಸಿದವರೇ ತಮ್ಮ ಸ್ವಂತಕ್ಕೇ ಬಂದರು.

ನಮ್ಮ ಊರಿನ ಹರಿಜನ ಕುಟುಂಬಕ್ಕೆ ಸೇರಿದ ಇಬ್ಬರು ಒಂದಷ್ಟು ವಾರ್ಷಿಕ ಭತ್ಯದ ಒಪ್ಪಂದದ ಮೇಲೆ ನಮ್ಮಪ್ಪನ ಕಾಲದಿಂದಲೂ ದುಡಿಯುತ್ತಿದ್ದರು ಮತ್ತು ಅಂದರೆ ಅದೇ ಕುಟುಂಬಕ್ಕೆ ಸೇರಿದ ಮತ್ತೊಬ್ಬನ ಕಷ್ಟವನ್ನು ನೋಡಲಾರದೆ ನವೆಂಬರ್ 1975 ರಲ್ಲಿ ಒಂದು ಸಾವಿರ ರೂಪಾಯಿಗಳನ್ನು ಬಡ್ಡಿ ಆಧಾರದ ಮೇಲೆ ಸಾಲ ಕೊಟ್ಟು ಆ ಸಾಲವನ್ನು ಎರಡು ವರ್ಷದ ಅವಧಿಯಲ್ಲಿ ತೀರಿಸುವಂತೆ ಹೇಳಿಕೆ ಕೊಟ್ಟಿದ್ದೆ. ಹೀಗಿರುವಾಗ 'ಜೀತ ಪದ್ಧತಿ ರದ್ದು' ಕೂಗು ಪೇಪರಿನಲ್ಲಿ ಕಾಣಿಸಿಕೊಂಡಿತು. ಅದನ್ನು ನೋಡಿ ನನ್ನ ಜಂಘಾಬಲವೇ ಉಡುಗಿ ಹೋಯಿತು. ಕಾರಣ ನಮ್ಮ ಮನೆಯಲ್ಲಿ ಬೇಸಾಯ ಮಾಡಲು ಯಾರಿಗೂ ಬರುತ್ತಿಲ್ಲ. ಇದರ ಜೊತೆಗೆ ಇನ್ನೊಂದು ಶನಿ ಕಾದಿತ್ತು. ನಾನು ಕೊಟ್ಟಿದ್ದ ಒಂದು ಸಾವಿರ ರೂಪಾಯಿ ಸಾಲಕ್ಕೆ ಬಡ್ಡಿಯಂತೂ ಬೇಡವೇ ಬೇಡ, ಅಸಲಾದರೂ ವಾಪಸ್ ಬರುತ್ತೋ ಇಲ್ಲವೋ ಎಂದು.

ನಾನು 'ಮುಂದೇನಾಯ್ತು' ಎಂದೆ.

ಅವರು ಬಹಳ ವ್ಯಥೆಯಿಂದ—"ಕೆಲವೇ ದಿನಗಳಲ್ಲಿ ಕಾರು ಜೀಪುಗಳಲ್ಲಿ ಬಂದ ಸರ್ಕಾರದವರು ನನ್ನಲ್ಲಿದ್ದ ಜೀತದಾಳುಗಳನ್ನು ಬಿಡುಗಡೆ ಮಾಡಿದರು. ಸಾಲ ತೆಗೆದುಕೊಂಡವನ ಹತ್ತಿರ ಸಾಲ ವಸೂಲಿ ಮಾಡಕೂಡದೆಂದು ಸಹ ಬೆದರಿಕೆ ಹಾಕಿ ಹೋದರು. ಇದರಿಂದ ನನಗೆ ಬಹಳಷ್ಟು ಅನ್ಯಾಯವಾಯಿತು" ಎಂದು ದುಡಿಸಿಕೊಂಡದ್ದನ್ನು ಮರೆತು ಹೇಳಿದರು.

ನಾನು "ನಿಮ್ಮ ಆಳುಗಳ ಮೇಲೆ ನಿಮಗಿದ್ದ ಕರುಣೆ ಈಗ ಪರಿವರ್ತನೆಯಾಯಿತಲ್ಲವೇ?" ಎಂದು ಪ್ರಶ್ನಿಸಿದೆ.

ಅವರು "ಹೌದು, ಅವರ ಬಗ್ಗೆ ನನಗೆ ಎಳ್ಳಷ್ಟು ಕರುಣೆ ಇಲ್ಲ. ಅವರನ್ನು ನಮ್ಮ ಮನೆಯ ಹತ್ತಿರ ಸುಳಿದಾಡಲೂ ಸಹ ಬಿಡುವುದಿಲ್ಲ. ಅವರ ಮುಂದಿನ ಹಣಕಾಸಿನ ಮತ್ತು ಇನ್ನಾವುದೇ ಕಷ್ಟಗಳಿಗೆ ನಾನು ಭಾಗಿಯಾಗಲು ಇಷ್ಟಪಡುವುದಿಲ್ಲ. ಕಾರಣ ಅವರಿಂದ ನನಗ್ಯಾವ ಲಾಭವೂ ಈಗ ಬರುವುದಿಲ್ಲ".

ಪ್ರಶ್ನೆ: ಹಾಗಾದರೆ ಜೀತ ಮುಕ್ತರನ್ನು ಕೂಲಿಗೆ ಕರೆಯುವುದಿಲ್ಲವೆ?

ಇಲ್ಲವೆಂಬಂತೆ ತಲೆಯಾಡಿಸಿದರು.

"ಕಾರಣ" ಪ್ರಶ್ನಿಸಿದೆ.

"ಸರ್ಕಾರದವರನ್ನು ಕೇಳಿ" ಎಂದರು.

"ಜೀತ ಮುಕ್ತರಿಗೆ ದೊರಕುವ ಲಾಭ ಯಾವ ಮಟ್ಟದ್ದು" ಕೇಳಿದೆ.

ಅವರು "ಜಮೀನುದಾರರ ಭೂಮಿಯಲ್ಲಿ ದುಡಿದು ಅವರು ಕೊಟ್ಟಿದ್ದ ಗುಡಿಸಲುಗಳಲ್ಲಿ ಹೇಗೋ ನೆಮ್ಮದಿಯಿಂದ ಜೀವಿಸುತ್ತ ಕಾಲ ತಳ್ಳುತ್ತಿದ್ದ ಜನರಿಗೆ ಈಗಿನ ಸರ್ಕಾರ ಅದನ್ನೂ ತಪ್ಪಿಸಿದೆ. ಅವರಿಗೆ ಯಾವ ಪರಿಹಾರವೂ ದೊರೆತಿಲ್ಲ [ದೊರೆಯುವಂತೆಯೂ] ಕಾಣುವುದಿಲ್ಲ. ಜೀತವಿಮುಕ್ತರನ್ನು ಯಾವ ಜಮೀನ್ದಾರನೂ ಕೂಡ ಕೂಲಿಗಾಗಿ ಕರೆಯದೆ ಟ್ರ್ಯಾಕ್ಟರುಗಳನ್ನು ಹೆಚ್ಚಾಗಿ ಖರೀದಿಮಾಡಲು ಇಷ್ಟಪಡುತ್ತಾರೆ" ಎಂದರು.

# 'ದಲಿತ' ದನಿ

'ಸೌಲಭ್ಯ', 'ಪ್ರಾತಿನಿಧ್ಯ' ಇನ್ನೂ
ಏನೇನೋ ಮಣ್ಣು ಮಸಣ;
ಗುಸುಗುಡುವಿರೇಕೆ ನಿಂತು ಬೆನ್ನ ಹಿಂದೆ
ಇನಿತೂ ಮುಗಿದಿಲ್ಲ ನಮ್ಮ ಋಣ.

ನೆಪ್ಪಿಲ್ಲವೆ ನಿಮಗೆ ಈ ಹಿಂದೆ
ನಿಮ್ಮ ಬಾಗಿಲ ಕಾದವರು ನಾವು.
ಅದಕೂ ಹಿಂದೆ ಮಸಣದಲಿ ನಿಮ್ಮ ಹೆಣ
ಸುಡುವವರೆಗೂ ಕಾವಲಿದ್ದೆವು.

ನಿಮ್ಮ ಊಳಿಗದ ಕ್ಷಯ ಬಡಿದು
ಬಲಿತಾಗ ಸೋಕದಿರಲೆಂದು ಊರ ಹೊರ ದಬ್ಬಿದಿರಿ
ನಾವಿಲ್ಲಿ ಬರಿ ಉದರ ಅಸ್ಥಿಗಳ ಪಡೆದು.
ಕಡಿದ ಆಧಾರಗಳಡಿಯಲಿ ಬಿದ್ದಿದ್ದೇವೆ ಭರವಸೆಗಳ ತಬ್ಬಿ.

ಬಂತೇನೋ ನಿಜ ಉದ್ಧರಿಸುವ ಕ್ರಾಂತಿ
ಸಿಂಗರಿಸಿ ಹಣೆಗಂಟಿಸಿದಿರಿ ಸಂಧಾನ ಪಟ್ಟಿ
ಆಯಿತೆಲ್ಲವೂ ದನಗಳ ಪಾಲಿನ ಸಂಕ್ರಾಂತಿ
ಅಂತೂ ಮಾಡಿಕೊಂಡಿರಿ ಮರುದಿನ ಗೆಯ್ಮೆಲಿಕೆ ಗಟ್ಟಿ.

ಸಂಸ್ಕಾರ, ಸಂಪತ್ತು, ದೌಲತ್ತು
ವೃತ್ರಾಸುರರೆ ಬಡಕೊಳ್ಳುವಿರೇಕೆ ಲಬೋ ಲಬ
ಗೊತ್ತು ಅವೆಲ್ಲಾ ನಿಮ್ಮ ಚಿರ ಸ್ವತ್ತು
ಸತ್ತಾಗ ಸ್ವರ್ಗಕ್ಕೂ ಒಯ್ದು ಪಡೆಯುವಿರಂತೆ ಲಾಭ.

—ಕು॥ ಮುನಿರತ್ನಮ್ಮ
ಗಂಜಿಗುಂಟೆ

# ಜಾತ್ಯಾತೀತ ರಾಷ್ಟ್ರ!

ಮಂಡ್ಯ ಡಿಸ್ಟ್ರಿಕ್ಟ್‌ನ ಮಳವಳ್ಳಿ ತಾಲ್ಲೂಕಿನ ದುಗ್ಗನಹಳ್ಳಿಯ ಜಾತ್ರೆಯೊಂದರಲ್ಲಿ ನಡೆದ ಘಟನೆ ಇದು. ಈ ಗ್ರಾಮದಲ್ಲಿ ಪ್ರತಿವರ್ಷವೂ ತಪ್ಪದೆ ಶ್ರೀ ಮಹಾದೇಶ್ವರ ಸ್ವಾಮಿಯ ಜಾತ್ರೆ ಬಹಳ ವಿಜೃಂಭಣೆಯಿಂದ ನಡೆಯುತ್ತದೆ. ಜಾತ್ರೆ ಎಂದಮೇಲೆ ದೇವರ ದರ್ಶನಕ್ಕೆಂದು ಅಕ್ಕಪಕ್ಕದ ಹಳ್ಳಿಗಳಿಂದ ವಿವಿಧ ಜನಾಂಗದವರು ಬಂದೇ ಬರುತ್ತಾರೆ. ಹಾಗೆಯೇ ವಿವಿಧ ಸ್ಥಳಗಳಿಂದ, ಅಂಗಡಿ ಹೋಟಲು ಹಾಕಿ ಹಣ ಸಂಪಾದಿಸಲೂ ಬರುತ್ತಾರೆ.

ಜಾತ್ರೆಮಾಳ ಸಾರ್ವಜನಿಕರ ಸ್ವತ್ತು. ಆದ್ದರಿಂದ ಅದೇ ಊರಿನ ಹರಿಜನನೊಬ್ಬನೂ ಉತ್ತಮರ ಹೋಟೆಲಿನ ಪಕ್ಕದಲ್ಲೇ ಹೋಟಲು ಹಾಕಿದ. ಜಾತ್ರೆಗೆ ಬಂದ ಜನಕ್ಕೇನು ಗೊತ್ತು? ಎಲ್ಲರೂ ತಿಂದು ಹೋಗುತ್ತಿದ್ದರು. ಆದರೆ ಲಿಂಗಾಯ್ತನೊಬ್ಬ ಈ ಹರಿಜನ ಹೋಟಲಲ್ಲಿ ತಿಂಡಿತಿಂದು ಹರಿಜನರದು ಎಂದು ಗೊತ್ತಾದಾಗ ತಕ್ಷಣ ಜಗಳ ಪ್ರಾರಂಭಿಸಿದ. ಇವರಿಬ್ಬರ ಜಗಳ ಜಾತಿಜಾತಿಗಳ ನಡುವಿನ ಹೋರಾಟವೇ ಆಯ್ತು. ಅಲ್ಪಸಂಖ್ಯಾತ ಹರಿಜನರಿಗೆ ಈ ಸವರ್ಣೀಯರು ದೊಣ್ಣೆ ಗಾಡಿಗೂಟಗಳಿಂದ ಹೊಡೆದರು. ಇಷ್ಟರಲ್ಲೂ ತೃಪ್ತಿ ಹೊಂದದ ಇವರು ಕೊನೆಗೆ ಆ ಹೋಟಲಿಗೇ ಬೆಂಕಿ ಹತ್ತಿಸಿಬಿಟ್ಟರು.

ಈ ಘಟನೆ ಕಳೆದ ವರ್ಷ ನಡೆದದ್ದು. ನಾನೂ ಕೂಡ ಈ ಘಟನೆ ಕಣ್ಣಾರೆ ಕಂಡು ಏನೂ ಮಾಡಲೂ ಸಾಧ್ಯವಾಗದಾಗ ಯೋಚಿಸಿ ಸುಮ್ಮನಿದ್ದೆ. ಈ ವರ್ಷವೂ ಕಾರಣಾಂತರದಿಂದ ಅದೇ ಜಾತ್ರೆಗೆ ಹೋದೆ. ಕಳೆದ ವರ್ಷದ ವಾತಾವರಣ ಬದಲಾಗಿತ್ತು. ಈ ಉತ್ತಮ ಜನಾಂಗದವರೆಲ್ಲಾ ಸೇರಿ "ಹರಿಜನರು ಇಲ್ಲಿ ಹೋಟಲು ಹಾಕುವಹಾಗಿಲ್ಲ. ಹಾಕಿದರೆ ಶಿಕ್ಷೆ. ಹಾಕಲೇಬೇಕೆಂದರೆ ಜಾತ್ರೆಮಾಳದಿಂದ ಬಹಳದೂರ ಹಾಕಿ, 'ಹರಿಜನರ ಹೋಟಲು' ಎಂದು ಬೋರ್ಡು ಹಾಕಬೇಕು" ಎಂದು ತಿಳಿಸಿದ್ದಾರೆ. ಹೋಟಲು ಹಾಕಬೇಕೆಂದಿದ್ದ ಹರಿಜನರು ಹೆದರಿ ಇದೇ ರೀತಿ ಬೋರ್ಡುಹಾಕಿ ಹೋಟಲು ನಡೆಸುತ್ತಿದ್ದರು.

ಭಾರತಕ್ಕೆ ಜಾತ್ಯಾತೀತರಾಷ್ಟ್ರ ಅಂತ ಭಾಷಣಕೊಚ್ಚುವ ಜನರಿಗೆ ಇದೆಲ್ಲ ನೋಡಿದರೆ ನಾಚಿಕೆಯಾಗುವುದಿಲ್ಲವೆ?

—ಹೆಚ್. ಬಿ. ಪುಟ್ಟಸ್ವಾಮಿ

# ಬಡವರ ಭಾಗ್ಯೋದಯ

ಭೂ ಸುಧಾರಣಾ ಶಾಸನವನ್ನು ಕಾರ್ಯಗತ ಮಾಡುತ್ತಿರುವುದರಿಂದ ಕರ್ನಾಟಕದಲ್ಲಿ ಸುಮಾರು ೮೦ ಸಾವಿರ ಕುಟುಂಬಗಳು ಭೂಮಿಯನ್ನು ಪಡೆಯುವರು. ಇದರಲ್ಲಿ ೪೦ ಸಾವಿರ ಹರಿಜನ ಕುಟುಂಬಗಳು. ಇದಲ್ಲದೆ, ಹತ್ತು ಲಕ್ಷ ಹೆಕ್ಟೇರುಗಳಲ್ಲಿ ಸಾಗುವಳಿ ಮಾಡುತ್ತಿರುವ ಒಕ್ಕಲುಗಳಿಗೆ ಭೂ ಮಾಲೀಕತ್ವದ ಹಕ್ಕುಗಳನ್ನು ಕೊಡಲಾಗುವುದು.

## ಮನೆ ಇಲ್ಲದವರಿಗೆ ಮನೆ

ವಾಸಕ್ಕೆ ಮನೆ ಇಲ್ಲದ ಕೃಷಿ ಕಾರ್ಮಿಕರಿಗೆ ರಾಜ್ಯದಲ್ಲಿ ಐದು ಲಕ್ಷಕ್ಕೂ ಮೇಲ್ಪಟ್ಟು ನಿವೇಶನಗಳನ್ನು ಉಚಿತವಾಗಿ ಹಂಚಲಗಿದೆ. ಜನತಾ ಗೃಹ ನಿರ್ಮಾಣ ಯೋಜನೆಯನ್ವಯ ೫೨ ಸಾವಿರಕ್ಕೂ ಮೀರಿ ಕಡಿಮೆ ವೆಚ್ಚದ ಮನೆಗಳನ್ನು ಕಟ್ಟುವ ಕಾರ್ಯವನ್ನು ಕೈಗೊಂಡಿದ್ದು ಈಗಾಗಲೇ ೩೦,೦೦೦ ಮನೆಗಳಲ್ಲಿ ಜನ ವಾಸಿಸಿ ಹಾಡಿ ಹರಸುತ್ತಿದ್ದಾರೆ.

## ಕಾರ್ಮಿಕರಿಗೆ ಹೆಚ್ಚಿನ ವೇತನ

ಸುಮಾರು ಮೂವತ್ತು ಮೂರು ಲಕ್ಷ ಕೆಲಸಗಾರರು ಅಕ್ಟೋಬರ್ ೨, ೧೯೭೫ ರಿಂದ ಕನಿಷ್ಠ ವೇತನ ಹೆಚ್ಚಳದ ಫಲವಾಗಿ ಅಧಿಕ ವೇತನ ಪಡೆಯುತ್ತಿದ್ದಾರೆ. ಅವರಲ್ಲಿ ೨೭ ಲಕ್ಷ ಕೃಷಿ ಕಾರ್ಮಿಕರು, ಐದು ಲಕ್ಷ ಬೀಡಿ ಕಾರ್ಮಿಕರು ಮತ್ತು ಒಂದು ಲಕ್ಷ ಕಲ್ಲು ಕುಟಿಗರು ಮುಂತಾದವರಿದ್ದಾರೆ.

## ನೇಕಾರರಿಗೆ ನೆರವು

ಕರ್ನಾಟಕ ಕೈಮಗ್ಗ ನೇಕಾರರ ಉದ್ದಿಮೆ ಅಭಿವೃದ್ಧಿ ಕಾರ್ಪೊರೇಷನ್ ರಚಿಸಲಾಗಿದೆ. ಕೈಮಗ್ಗದ ಉದ್ಯಮದಲ್ಲಿ ನಿರತರಾಗಿರುವವರಿಗೆ ಅದು ನೆರವಿತ್ತು ಈ ಉದ್ದಿಮೆಯನ್ನು ಪುನರುಜ್ಜೀವಗೊಳಿಸುವುದು.

ಅಮಾನುಷ ಜೀತ ಪದ್ಧತಿಯನ್ನು ತೊಡೆದುಹಾಕಲಾಗಿದೆ.

ಸಹಕಾರಿ, ಸರ್ಕಾರ ಮತ್ತು ಸಾರ್ವಜನಿಕ ಆರ್ಥಿಕ ಸಂಸ್ಥೆಗಳಿಗೆ ಮರಳಿ ಮುಟ್ಟಿಸಬೇಕಾದ ಸಾಲವನ್ನು ಉಳಿದು ಇತರೆ ಸಾಲಗಳ ಭಾರದಿಂದ ವಾರ್ಷಿಕ ಆದಾಯ ೨,೪೦೦ ರೂಪಾಯಿಗಳನ್ನು ಮೀರದ ಸಣ್ಣ ರೈತರು, ಕೃಷಿ ಕಾರ್ಮಿಕರು ಮತ್ತಿತರ ದುರ್ಬಲ ವರ್ಗದವರನ್ನು ಮುಕ್ತಗೊಳಿಸಲಾಗಿದೆ.

ಪ್ರಧಾನ ಮಂತ್ರಿ ಶ್ರೀಮತಿ ಇಂದಿರಾ ಗಾಂಧಿಯವರು ಸಾರಿರುವ ೨೦ ಅಂಶಗಳ ಕಾರ್ಯಕ್ರಮ ಜಾರಿಗೆ ತರುವಲ್ಲಿ ಕರ್ನಾಟಕ ಕೈಗೊಂಡಿರುವ ಅನೇಕ ಕಾರ್ಯಕ್ರಮಗಳಲ್ಲಿ ಇವು ಕೆಲವು ಮಾತ್ರ.

## ಪ್ರಕಟಣೆ

ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ.

**ಕರ್ನಾಟಕ ಸರಕಾರ, ಬೆಂಗಳೂರು**

# ಮೈಸೂರು ಕಾಗದ ಕಾರ್ಖಾನೆಯಲ್ಲಿ ಹರಿಜನರಿಗೆ ಅನ್ಯಾಯ

(ನಮ್ಮ ವಿಶೇಷ ಪ್ರತಿನಿಧಿಯಿಂದ)

ಭದ್ರಾವತಿಯಲ್ಲಿರುವ ಮೈಸೂರು ಕಾಗದ ಕಾರ್ಖಾನೆಗೆ 1975ಕ್ಕೆ ೪೦ ವರ್ಷಗಳು ಸಂದವು. ಕಂಪನಿಯು ಭಾರತದ ಪ್ರಮುಖ ಕಾಗದ ಉದ್ಯಮಗಳಲ್ಲಿ ಒಂದಾಗಿದ್ದು, ವರ್ಷಕ್ಕೆ ೭೦,೦೦೦ ಮೆಟ್ರಿಕ್ ಟನ್ ಮುದ್ರಣ ಕಾಗದವನ್ನು ಉತ್ಪಾದಿಸುತ್ತಿದೆ. ಇದರೊಂದಿಗೆ ಹಾಲಿ ದೇಶದಲ್ಲಿ ಉಂಟಾಗುವ ನ್ಯೂಸ್ ಪ್ರಿಂಟ್ ಕೊರತೆ ತುಂಬಲು ಕಂಪನಿ ವಿಸ್ತರಣೆಗಾಗಿ ಕೇಂದ್ರವು ೭೩ ಕೋಟಿ ರೂ. ಗಳನ್ನು ಮಂಜೂರು ಮಾಡಿದೆ. ಅದರಿಂದ ಪ್ರತಿ ವರ್ಷ ೧೫,೦೦೦ ಮೆಟ್ರಿಕ್ ಟನ್ ಗಳಷ್ಟು ಮ್ಯಾಗಜೀನ್ ಕಾಗದ ಮತ್ತು ೭೫,೦೦೦ ಮೆಟ್ರಿಕ್ ಟನ್‌ಗಳಷ್ಟು ನ್ಯೂಸ್ ಪ್ರಿಂಟ್ ತಯಾರಿಸಲು ಉದ್ದೇಶಿಸಲಾಗಿದೆ. ೧೯೭೫ನೇ ಸಾಲಿನಲ್ಲಿ ಕಾರ್ಖಾನೆಯ ಒಟ್ಟು ವ್ಯಾಪಾರ ಮೊತ್ತವು ೮೩೬ ಲಕ್ಷ ರೂ. ಗಳು. ಲಾಭದ ಮೊತ್ತ ೧೧೯ ಲಕ್ಷ ರೂ. ಗಳು. ಇಂತಹ ಒಂದು ದೊಡ್ಡ ಕಾರ್ಖಾನೆಯಲ್ಲಿ ಹರಿ ಗಿರಿ ಜನರಿಗೆ ಸಿಕ್ಕುತ್ತಿರುವ ಪ್ರಾತಿನಿಧ್ಯ ಶೋಚನೀಯ.

ಕಂಪನಿಯ ಮಂತ್ಲಿ ಹಾಗೂ ಕನ್ವರ್‌ಟೆಡ್ ಮಂತ್ಲಿ ವಿಭಾಗಗಳಲ್ಲಿ ಕೆಲಸ ಮಾಡುವ ಒಟ್ಟು ಕೂಲಿಗಾರರ ಸಂಖ್ಯೆ ೧೭೫೫. ಅದರಲ್ಲಿ ಹರಿಗಿರಿಜನರ ಸಂಖ್ಯೆ ಕೇವಲ ೧೬೭. ಈ ೧೯೭ರಲ್ಲಿ ೫೭ ಜನ ಜಾಡಮಾಲಿಗಳಿದ್ದಾರೆ. ಜಾಡಮಾಲಿ ಹುದ್ದೆಗಳಿಗೆ ಸವರ್ಣೀಯರು ಸ್ಪರ್ಧಿಸುವುದಿಲ್ಲ. ಹಾಲಿ ಸಂಖ್ಯೆಗೆ ಅನುಗುಣವಾಗಿ ೪೦ ವರ್ಷಗಳಲ್ಲಿ ಹರಿಗಿರಿಜನರಿಗೆ ಶೇ. ೯.೫ ಪ್ರಾತಿನಿಧ್ಯ ಸಿಕ್ಕಿದೆ. ಅಷ್ಟನ್ನು ಕೊಡುವಾಗಲೂ ಸಾಕಷ್ಟು ಕಿರುಕುಳ, ತೊಂದರೆ, ಬಡ್ತಿಗಳಲ್ಲಿ ಅನ್ಯಾಯವೆಸಗಲಾಗಿದೆ. ಕಂಪನಿಯಲ್ಲಿ ಯಾವ ಯಾವ ಜನಾಂಗದವರು ಎಷ್ಟೆಷ್ಟಿದ್ದಾರೆ ಎಂಬ ಅಂಕಿ ಅಂಶತೆಗೆದರೆ ಈ ಮಾತಿನ ಸತ್ಯ ಅರ್ಥವಾದೀತು!

ಕಾರ್ಖಾನೆಯ ಒಟ್ಟು ಸಂಖ್ಯೆಯಲ್ಲಿ ಹರಿಗಿರಿಜನರ ಪ್ರಾತಿನಿಧ್ಯವೆಷ್ಟು ಎಂಬುದನ್ನು ಕೆಳಕಂಡ ಅಂಕಿಅಂಶಗಳು ದೃಢಪಡಿಸುತ್ತವೆ.

| ಕ್ರ.ಸಂ. | ಹುದ್ದೆಯ ಹೆಸರು | ಒಟ್ಟು ಸಂಖ್ಯೆ | ಹರಿಗಿರಿಜನರು |
|---|---|---|---|
| ೧. | ಸಲಹೆಗಾರರು, ಜನರಲ್ ಮ್ಯಾನೇಜರ್, ಡಿವಿಜನಲ್ ಮ್ಯಾನೇಜರ್ | ೮ | ಇಲ್ಲ |
| ೨. | ಆಡಳಿತ ವಿಭಾಗ ಕೂಡಿಕೊಂಡು ಜೂನಿಯರ್ ಸೂಪರಿಂಟೆಂಡೆಂಟರು | ೪೩ | ಇಲ್ಲ |
| ೩. | ಆಡಳಿತ ವಿಭಾಗ ಕೂಡಿಸಿ ಕೊಂಡು ಸೀನಿಯರ್ ಫೋರ್‌ಮನ್ | ೧೯ | ಇಲ್ಲ |
| ೪. | ಆಡಳಿತ ವಿಭಾಗ ಕೂಡಿಸಿ ಕೊಂಡು ಸೀನಿಯರ್ ಫೋರ್‌ಮನ್ | ೩೦ | ಒಬ್ಬರು |
| ೫ | ಆಡಳಿತ ವಿಭಾಗ ಕೂಡಿಸಿ ಕೊಂಡು ಫೋರ್‌ಮನ್ | ೯೧ | ಇಲ್ಲ |
| ೬. | ಆಡಳಿತ ವಿಭಾಗ ಕೂಡಿಸಿ ಕೊಂಡು ಸೀನಿಯರ್ ಕ್ಲರ್ಕ್ | ೩೪ | ಇಲ್ಲ |
| ೭. | ಆಡಳಿಕ ವಿಭಾಗ ಕೂಡಿಸಿ ಕೊಂಡು ಜೂನಿಯರ್ ಕ್ಲರ್ಕ್ | ೧೧೭ | ೪ |
| ೮. | ಹೆಡ್ ವಾಚ್‌ಮನ್, ಜೂನಿಯರ್ ವಾಚ್‌ಮನ್, ಸೀನಿಯರ್ ವಾಚ್‌ಮನ್ | ೬೬ | ೨ |
| ೯. | ಅಟೆಂಡರ್ಸ್, ಅಡುಗೆಯಾಳುಗಳು ಡ್ರೆಸರ್ಸ್ ಆಯಾಗಳ, | ೭೪ | ೫ |
| ೧೦. | ಡ್ರೈವರ್ ಮತ್ತು ಕ್ಲೀನರುಗಳು | ೨೩ | ೧ |
| ೧೧. | ಜಾಡಮಾಲಿಗಳು ಮತ್ತು ಕ್ಲೀನರುಗಳು | ೫೭ | ೫೭ |
| | ಒಟ್ಟು | ೫೫೫ | ೨೦ |

೧. ಕನ್ವರ್‌ಟೆಡ್ ಮಂತ್ಲಿಯಲ್ಲಿ ೧೨೦೦ ಕೆಲಸಗಾರರಿದ್ದಾರೆ. ಅವರಲ್ಲಿ ಹರಿಗಿರಿಜನರ ಸಂಖ್ಯೆ ೯೭. ಅದರ ಅಂಕಿ ಅಂಶ ಇಂತಿವೆ:

| ಕ್ರ.ಸಂ. | ಹುದ್ದೆಯ ಹೆಸರು | ಒಟ್ಟು ಸಂಖ್ಯೆ | ಹರಿಗಿರಿಜನರು |
|---|---|---|---|
| ೧. | ಹೈಲಿ ಸ್ಕಿಲ್ಡ್ | ೮೪ | ೭ |
| ೨. | ಫಸ್ಟ್ ಗ್ರೇಡ್ | ೧೪೦ | ೧೦ |
| ೩. | ಸೆಕೆಂಡ್ ಗ್ರೇಡ್ | ೨೦೦ | ೨೦ |
| ೪. | ಥರ್ಡ್ ಗ್ರೇಡ್ | ೨೮೮ | ೧೬ |
| ೫. | ಫೋರ್ತ್ ಗ್ರೇಡ್ | ೨೪೬ | ೨೬ |
| ೬. | ಫಿಫ್ತ್ ಗ್ರೇಡ್ | ೨೨೧ | ೧೮ |
| ೭. | ಸಿಕ್ಸ್ತ್ ಗ್ರೇಡ್ | ೨೧ | ಇಲ್ಲ |
| | ಒಟ್ಟು | ೧೨೦೦ | ೯೭ |

ವಸ್ತುಸ್ಥಿತಿ ಹೀಗಿದ್ದರೂ ಕಳೆದ ವರ್ಷದ ಕೊನೆಯಲ್ಲಿ ಕಂಪನಿಗೆ ಭೇಟಿಕೊಟ್ಟ ಎಸ್. ಸಿ. ಕಮಿಷನ್. ಆಡಳಿತ ಮಂಡಳಿ ಕೊಟ್ಟ ತಪ್ಪು ಅಂಕಿಅಂಶ ಇಂತಿವೆ:

೧ ಮಂತ್ಲಿ ಕೇಡರ್:

| ಕ್ರ.ಸಂ. | ಹುದ್ದೆಯ ಹೆಸರು | ಹರಿಗಿರಿಜನರು |
|---|---|---|
| ೧. | ಸೀನಿಯರ್ ಫೋರ್‌ಮನ್ | ಒಬ್ಬರು |
| ೨. | ಫೋರ್‌ಮನ್ | ಒಬ್ಬರು |
| ೩. | ಕ್ಲರ್ಕ್ ಇತ್ಯಾದಿ | ೫ |
| .೪ | ಡ್ರೈವರ್ಸ್ | ಒಬ್ಬರು |
| ೫. | ಹೆಡ್ ವಾಚ್ ಮನ್ | ಒಬ್ಬರು |
| ೬. | ಸೂಪರ್‌ವೇಸರ್, ಮೇಸ್ತ್ರಿ, ಸೀನಿಯರ್ ಅಟೆಂಡರ್ ಇತ್ಯಾದಿ | ೪ |
| ೭. | ಸೀನಿಯರ್ ವಾಚ್‌ಮನ್, ಗ್ಯಾಂಗ್ ಮನ್, ಸೀನಿಯರ್ ಅಟೆಂಡರ್ | ೧೨ |
| ೮. | ಕಂಡೆಕ್ಟರಸ್, ಕ್ಲೀನರ್ಸ್, ಕ್ಯಾಂಟೀನ್ ವೆಂಡರ್ಸ್ ಇತ್ಯಾದಿ | ೨ |
| ೯. | ಜೂನಿಯರ್ ವಾಚ್‌ಮನ್; ಜೂನಿಯರ್ ಅಟೆಂಡರ್, ಗ್ಯಾಂಗ್‌ಮನ್, ಸ್ವಿಪರ್ಸ್ ಆಫೀಸರ್, ಅಟೆಂಡರ್ಸ್ ಮತ್ತು ಕ್ಲೀನರ್ಸ್ | ೫೦ |
| | ಒಟ್ಟು | ೭೭ |

೨. ಕನ್ವರಟೆಡ ಮಂತ್ಲಿ ಕೇಡರ:

| ಕ್ರ.ಸಂ. | ಹುದ್ದೆಯ ಹೆಸರು | ಹರಿಗಿರಿಜನರು |
|---|---|---|
| ೧. | ಹೈಲಿಸ್ಕಿಲ್ಡ | ೭ |
| ೨. | ಫಸ್ಟ ಗ್ರೇಡ | ೧೮ |
| ೩. | ಸೆಕೆಂಡ ಗ್ರೇಡ | ೩೫ |
| ೪. | ಥರ್ಡ ಗ್ರೇಡ | ೩೭ |
| ೫. | ಫೋರ್ತ ಗ್ರೇಡ | ೩೨ |
| 9. | ಫಿಫ್ತ ಮತ್ತು ಸಿಕ್ಸ್ತ ಗ್ರೇಡ | ೬೦ |
| | ಒಟ್ಟು | ೧೮೯ |

# ಕೂಲಿ ಹೆಚ್ಚಿಸಲು ಕೇಳಿದ್ದಕ್ಕೆ ದೊರೆತ ಫಲ: ಹಸುಳೆಗಳೂ ಸೇರಿ ೪೨ ಹರಿ

ಸರ್ಕಾರ ಹರಿಜನ ಗಿರಿಜನರಿಗಾಗಿ ವಿಶೇಷ ಸವಲತ್ತು ಕಾನೂನಿನ ರಕ್ಷಣೆ ಒದಗಿಸಿದೆಯಾದರೂ ದೈನಂದಿನ ಜೀವನದಲ್ಲಿ ಇವೇನಾದರೂ ಸಾಧಿತವಾಗಿವೆಯೆ? ಯಾರಿಗೆ ಸವಲತ್ತು ರಕ್ಷಣೆ ಒದಗಿಸಲಾಗಿದೆಯೋ ಅವರಿಗೆ ಇವರ ಬಗೆಗೆ ಎಳ್ಳಷ್ಟಾದರೂ ಅರಿವಿದೆಯೆ? ಏತಕ್ಕೆ ಅವರಿನ್ನೂ ಹಿಂದುಳಿದಿದ್ದಾರೆ? ಕಾನೂನಿನ ರಕ್ಷಣೆ ಸವಲತ್ತಿನ ಅರಿವು ಅವರಿಗಿಲ್ಲ. ಬದಲಿಗೆ ಅವರನ್ನು ಕಾಣುವ ವೃತ್ತಿ ಮತ್ತಷ್ಟು ಕ್ರೂರವಾಗಿದೆ, ಅಮಾನುಷವಾಗಿದೆ. ಹರಿಜನ ಕೇರಿಗೆ ಬೆಂಕಿ, ಹರಿಜನರ ಬೆತ್ತಲೆ ಪ್ರದರ್ಶನ, ಜೀವಂತ ಆಹುತಿಗಳು ದಿನೇ ದಿನೇ ಹೆಚ್ಚುತ್ತಿವೆ. ಇದಕ್ಕೆ ಉದಾಹರಣೆಯಾಗಿ ತಮಿಳು ನಾಡಿನಲ್ಲಿ ನಡೆದ ನರಮೇಧವೊಂದನ್ನು ಇಲ್ಲಿ ವಿವರಿಸಲಾಗಿದೆ.

### ಸ್ಮಶಾನ ಭೂಮಿ

ತಮಿಳು ನಾಡಿನ ನಾಗಪಟ್ಟಣ ತಾಲ್ಲೂಕಿನಲ್ಲಿ ಕಿಲ್ವಮಣಿ ಎಂಬ ಒಂದು ಹಳ್ಳಿ ಇದೆ. ಅಲ್ಲಿ ಹಿಂದೆ ಇದ್ದ ಹರಿಜನ ಕುಟೀರಗಳ ಬದಲು ಇಂದು ಹರುಕು ಮುರುಕು ಗೋಡೆಗಳ, ಬಾಳೆಬಿದ್ದ ಗುಡಿಸಲುಗಳು. ಅರೆಸುಟ್ಟ ಜೋಪಡಿಗಳು ಹಾಗೂ ಅಲ್ಲಲ್ಲಿ ಸರ್ಕಾರದ ವತಿಯಿಂದ ಕಟ್ಟಿಸಲ್ಪಟ್ಟ ಜೀರ್ಣಾವಸ್ಥೆಯಲ್ಲಿರುವ ಇಟ್ಟಿಗೆ ಮನೆಗಳನ್ನು ಕಾಣಬಹುದು. 1968ರ ಕ್ರಿಸ್‌ಮಸ್ ಹಬ್ಬದಂದು ನಡೆದ ಹರಿಜನ ಕೇರಿ ಯಜ್ಞದ ಸ್ವರೂಪವನ್ನು ಬಿಂಬಿಸುತ್ತದೆ ಹಳ್ಳಿ. 1968ರ ನಂತರ ಅಲ್ಲಿಗೆ ಭೇಟಿ ಇತ್ತ ಓರ್ವರ ಪ್ರಕಾರ "ನಾನು ಅಲ್ಲಿ ಆ ಸ್ಮಶಾನ ಭೂಮಿಯಲ್ಲಿ ಓರ್ವ ಮುದುಕಿ ಹಾಗೂ ಅವಳ ಮುಂದೆ ತನ್ನ ತಲೆಯನ್ನು ಕಾಲಿನೊಳಗೆ ಹುದುಗಿಸಿಕೊಂಡು ಕುಳಿತ ನಾಯಿಯನ್ನಲ್ಲದೆ ಬೇರೆ ಯಾರನ್ನೂ ಕಾಣಲಿಲ್ಲ. ಕೆಲವರು ಆಸ್ಪತ್ರೆಯಲ್ಲೂ, ಮತ್ತೆ ಕೆಲವರು ಜೈಲಿನಲ್ಲೂ ಇದ್ದರು. ಹಳ್ಳಿಯ 42 ಮಂದಿಯಲ್ಲಿ ಹೆಚ್ಚಾಗಿ ಹೆಂಗಸರು, ಮಕ್ಕಳು ಹಾಗೂ ಮತ್ತೆ ಕೆಲ ಮುದುಕರನ್ನು ಕ್ರಿಸ್‌ಮಸ್ ದಿನದಂದು ಜೀವಂತ ದಹನ ಮಾಡಲಾಗಿತ್ತು."

ಈ ನರಮೇಧಕ್ಕೆ ಕಾರಣವೇನು? ಎಂಬುದು ಪ್ರಮುಖವಾದ ಪ್ರಶ್ನೆ.

ತಂಜಾವೂರು ಜಿಲ್ಲೆ ಇನಾಮುದಾರಿ ವ್ಯವಸಾಯ ಪದ್ಧತಿಗೆ ಹಾಗೂ ಬ್ರಾಹ್ಮಣ ಮಡಿವಂತಿಕೆಗೆ ಹೆಸರು ಪಡೆದ ಪ್ರದೇಶ. ಅಲ್ಲಿಯ ಒಬ್ಬ ಸಾಮಾನ್ಯ ರೈತ ಮನೆಯವನು ಯಾವುದೋ ವಿಶೇಷ ಕಾರ್ಯಕ್ಕೆ ಸಾಲ ಪಡೆದು ಜೀವನ ಪರ್ಯಂತ ಅದನ್ನು ತೀರಿಸಲೋಸುಗ ಜಮೀನುದಾರನಿಗಾಗಿ ದುಡಿಯುತ್ತಿರುತ್ತಾನೆ. ಇಂಥವರನ್ನು ಪನ್ನೈಯ್ಯಾಲರು ಎಂದು ಕರೆಯುವರು. ಈ ರೀತಿ ಸ್ವಂತ ಭೂಮಿಯಿಲ್ಲದೆ ಜಮೀನುದಾರರಿಗಾಗಿ ದುಡಿಯುವವರ ಸಂಖ್ಯೆ ಶೇಕಡ 42 ಇದೆ. ರಾಜ್ಯದ ಸರಾಸರಿ ಪ್ರಕಾರ ಶೇಕಡ 29.1. ಕಿಲ್ವಮಣಿಯಲ್ಲಿಯೇ ಇದರ ಸಂಖ್ಯೆ ಶೇಕಡ 64 ಇದೆ. 1971ರ ಎಣಿಕೆಯ ಪ್ರಕಾರ ಒಟ್ಟು 1302 ಜನಸಂಖ್ಯೆಯಲ್ಲಿ 668 ಅಂದರೆ ಶೇಕಡ 51 ಜನರು ಹರಿಜನರಾಗಿದ್ದು ಎಲ್ಲರೂ ಕೆಲಸಗಾರರು ಅಥವಾ ಕೂಲಿಗಾರರೇ ಆಗಿರುವರು.

ಕಿಲ್ವಮಣಿಯಲ್ಲಿ ಒಬ್ಬ ಹರಿಜನನಿಗೂ ಒಂದು ಎಕರೆ ಭೂಮಿ ಇಲ್ಲ. ಒಬ್ಬನೂ ಸಹ ಭೂಮಿಯನ್ನು ಗೇಣಿಗೆ ಕೊಡುವಷ್ಟು ಆರ್ಥಿಕವಾಗಿ ಸುಧಾರಿಸಿಲ್ಲ. ಸಮಾಜದ ಇಂಥಹ ಆರ್ಥಿಕವ್ಯವಸ್ಥೆಯಲ್ಲಿ ಜಮೀನುದಾರರು ರೈತರ ದಾರಿದ್ರ್ಯತನವನ್ನು ಮುಂದುವರಿಸಿಕೊಂಡು ಹೋಗುವುದು ಸುಲಭಸಾಧ್ಯವಾಗಿದೆ. ಅಲ್ಲದೆ ಜಾತಿಯ ಆಧಾರದ ಮೇಲೆ ಭೂಹೀನ ರೈತರ ಮೇಲೆ ಗೇಣಿದಾರರನ್ನು ಎತ್ತಿಕಟ್ಟಲೂ ಸಾಧ್ಯವಾಗಿದೆ. ಭತ್ತ ಬೆಳೆಗಾರರ ಸಂಘದ ಒಂದು ಮೆರವಣಿಗೆಯಲ್ಲಿ "ಪರಿಯರು ಕೆಳಗಿಳಿಯಲಿ, ಪಲ್ಲನರು ಕೆಳಗಿಳಿಯಲಿ" ಎಂಬ ಘೋಷಣೆಗಳನ್ನು ಕೂಗಲಾಗಿತ್ತು.

### ಡಿಸೆಂಬರ್ ದುರಂತ

ಡಿಸೆಂಬರ್ ದುರಂತದಲ್ಲಿ ತನ್ನವರು, ತನ್ನದೆಲ್ಲವನ್ನೂ ಕಳೆದುಕೊಂಡ ಮುನಿಯಾ ಎಂಬಾತ ಅದರ ಹಿನ್ನಲೆಯನ್ನು ಹೀಗೆ ವಿವರಿಸುತ್ತಾನೆ: ಆತ ಹಾಗೂ ಕೆಲವು ಹರಿಜನರು ವೇತನ ಹೆಚ್ಚಳಕ್ಕಾಗಿ ಜಮೀನುದಾರರಲ್ಲಿ ಬೇಡಿಕೆಯನ್ನು ಇತ್ತದ್ದು ಆ ಭೀಕರ ಹತ್ಯೆಗೆ ಎರಡನೇ ಕಾರಣವಾಗಿದೆ. ಗೋಪಾಲಕೃಷ್ಣ ನಾಯುಡು ಎಂಬಾತನು ಭತ್ತ ಬೆಳೆಗಾರರ ಸಂಘವನ್ನು ಜಮೀನುದಾರರ ಪರವಾಗಿ ಸ್ಥಾಪಿಸಿದ್ದು ಹರಿಜನ ಕೆಲಸಗಾರರನ್ನು ಅದಕ್ಕೆ ಸೇರಿಕೊಳ್ಳುವಂತೆ ಒತ್ತಾಯ ಹೇರಲಾರಂಭಿಸಿದನು. ಈ ವೇಳೆಗೆ ಹರಿಜನರು ಫ್ಲಾಗ್ ಯೂನಿಯನ್‌ಗೆ ಸೇರಿದ್ದರಿಂದ ಆತನ ಒತ್ತಾಯವನ್ನು ಮನ್ನಿಸಲಿಲ್ಲ. ನಾಯುಡು ಕೋಪಗೊಂಡಿದ್ದ. ಸುಗ್ಗಿಯ ವೇಳೆಗೆ ಹರಿಜನರು ವೇತನ ಹೆಚ್ಚಳಕ್ಕಾಗಿ ಬೇಡಿಕೆಯನ್ನು ಸಲ್ಲಿಸಿದಾಗ ನಾಯುಡು ಅವರು ಫ್ಲಾಗ್ ಯೂನಿಯನ್ನನ್ನು ಮುಚ್ಚುವುದಾದರೆ ಮಾತ್ರ ವೇತನ ಹೆಚ್ಚಳ ನೀಡುವುದಾಗಿ ಷರತ್ತನ್ನು ಹಾಕಿದನು. ಹಲವು ವರ್ಷಗಳಿಂದ ಸ್ಥಾಪಿತವಾದ ಯೂನಿಯನ್ನನ್ನು ಮುಚ್ಚಲು ಹರಿಜನರು ಸಿದ್ಧರಿರಲಿಲ್ಲ. ಒಂದು ದಿನ ಅವರು ಗೋವಿಂದ ನಾಯರ್ ಎಂಬುವರ ಹೊಲದಲ್ಲಿ ಇನ್ನೇನು ಕೆಲಸಕ್ಕೆ ತೊಡಗಬೇಕು ಆಗ ಗೋಪಾಲಕೃಷ್ಣ ನಾಯುಡು ಹರಿಜನ ಪಂಚಾಯಿತಿ ಅಧ್ಯಕ್ಷರನ್ನು ಕರೆಯಿಸಿ ಹರಿಜನರೆಲ್ಲ ಭತ್ತ ಬೆಳೆಗಾರರ ಸಂಘಕ್ಕೆ ಸೇರಿಕೊಳ್ಳಬೇಕು. ಇಲ್ಲವಾದರೆ ಪ್ರತಿಯೊಬ್ಬನೂ 250ರೂ. ದಂಡ ಕೊಡಬೇಕು, ಅನಂತರವೇ ಕೆಲಸದ ಆರಂಭ ಎಂದು ತಿಳಿಸಿದನು. ಹರಿಜನರೆಲ್ಲ ಒಗ್ಗಟ್ಟಾಗಿ ಸೇರಿ ನೀವು ನಿಮ್ಮ ಸಂಸ್ಥೆಯನ್ನು ಹೊಂದಿರುವಂತೆ ನಾವು ನಮ್ಮದನ್ನು ಹೊಂದಿದ್ದೇವೆ ಎಂದು ತಿಳಿಸಿದರು. ನಾಯುಡು ಮಂಡಲ ಕಾಂಗ್ರೆಸ್ ಅಧ್ಯಕ್ಷನೂ ಆಗಿದ್ದನು. ಆತನ ಆದೇಶದಂತೆ ಎಲ್ಲ ಜಮೀನುದಾರರೂ ಹರಿಜನರನ್ನು ಕೆಲಸಕ್ಕೆ ತೆಗೆದುಕೊಳ್ಳದೆ ಹೊರಗಿನಿಂದ ಕೂಲಿಯಾಳುಗಳನ್ನು ಕರೆಸಲಾರಂಭಿಸಿದರು.

### ಕಮ್ಯೂನಿಸ್ಟರಿಗೆ ವಂದನೆ

ಕಿಲ್ವಮಣಿ ಹತ್ತಿರದ ಅಲತುಂಬಾಡಿ ಎಂಬ ಊರಿನ ಕೆಲವು ಜಮೀನುದಾರರ ಅಭಿಪ್ರಾಯದಂತೆ ವೇತನ ಹೆಚ್ಚಳಕ್ಕಿಂತ ಈ ನರಹತ್ಯೆಗೆ ಪ್ರಮುಖ ಕಾರಣವೆಂದರೆ ಹರಿಜನರಲ್ಲಿ ಹೆಚ್ಚುತ್ತಿದ್ದ ಪೌರುಷತ್ವ. ಒಬ್ಬ ಜಮೀನುದಾರನು "ಯಾವ ಕಾಲದಲ್ಲಿ ಈ ಜನ ಕಷ್ಟಪಟ್ಟು ದುಡಿಯುತ್ತಿದ್ದರೋ, ಆಗ ಪರಿಸ್ಥಿತಿ ಅನುಕೂಲಕರವಾಗಿಯೇ ಇತ್ತು. ಹಿಂದೆ ಯಾವ ಜನ ನಮ್ಮ ಮನೆಯ ಹಿಂಭಾಗದಲ್ಲಿ ಅಂಜಿ ಅಂಜಿ ನಿಂತು ಮಾತನಾಡ… ಗಿತ್ತೋ, ಆತನೀಗ ಚಪ್ಪಲಿ-ಗಿಪ್ಪಲಿ ಹಾಕಿಕ… ನೇರವಾಗಿ ಚಾವಡಿ ಏರುತ್ತಾನೆ. ಆತನ ನಾಯಕ… ಹಳ್ಳೀ ಸಭೆಯನ್ನು ನಡಿಸಿ, ಬಂದೂಕವನ್ನು … ಗಲ್ಲಿಗಳಲ್ಲಿ ಪ್ರದರ್ಶನ ನಡೆಸುವರು. ಈ ಜನರಿಗೆ … ಭಯಭೀತಿಗಳೂ ಇಲ್ಲ. ಕಮ್ಯುನಿಸ್ಟರಿಗೆ ವಂದನ… ಎನ್ನುತ್ತಾನೆ.

ವೇತನ ಹೆಚ್ಚಳಕ್ಕಾಗಿ ಬೇಡಿಕೆ ಹಾಗೂ ಹರಿ… ಬೆಳೆಯುತ್ತಿದ್ದ ಪೌರುಷತ್ವ ಇವು ಸವರ್ಣೀಯರ … ಮುಳ್ಳಾದವು. ಹರಿಜನರ ಸ್ವಾಭಿಮಾನ ಅವರಿಗೆ … ತನವೆನಿಸಿತು. ಅದಕ್ಕಾಗಿ ಡಿಸೆಂಬರ್ 25 ರಂದು … ಮೇಲೆ ಹತ್ಯಾಕಾಂಡ ನಡೆಸಿದರು.

## ನಮ್ಮ ಯೋಜನೆಗ…

ಜನವರಿ 26, 1950 ರಂದು ನಾವು ಪರಸ್ಪರ ವಿರೋ… ತ್ಮಕ ತತ್ವವನ್ನೊಳಗೊಂಡ ಜೀವನದಲ್ಲಿ ಪ್ರ… ಮಾಡುವವರಿದ್ದೇವೆ. ರಾಜಕೀಯವಾಗಿ ನಮಗೆ … ಯಿದ್ದರೂ ಸಾಮಾಜಿಕ ಹಾಗೂ ಆರ್ಥಿಕವಾಗಿ … ಅಸಮತೆ ಇದೆ. ರಾಜಕೀಯವಾಗಿ ಒಬ್ಬನಿಗೆ … ಓಟು—ಒಂದು ಓಟಿಗೆ ಒಂದು ಮೌಲ್ಯ ಎಂಬ… ಯನ್ನು ಒಪ್ಪಿಕೊಳ್ಳುತ್ತೇವೆ. ಆದರೆ ನಮ್ಮ ಸಾಮಾ… ಆರ್ಥಿಕ ರಚನೆಯಿಂದಾಗಿ ಮೇಲೆ ಹೇಳಿದ ರಾಜಕೀ… ಸಮತೆಯನ್ನು ಅಲ್ಲಗಳೆಯುತ್ತಿದ್ದೇವೆ. ಈ ವಿಪರ… ಜೀವನವನ್ನು ಇನ್ನೆಷ್ಟು ದಿನ ಮುಂದುವರಿಸೋಣ…

—ಡಾ॥ ಬಿ. ಆರ್. ಅಂಬೇ…

### ದಲಿತವರ್ಗಕ್ಕಾಗಿ ಯೋಜನೆಗಳು

ಆರ್ಥಿಕ ಅಸಮಾನತೆಯನ್ನು ಕಡಿಮೆ ಮಾಡು… ನಮ್ಮ ಯೋಜನೆಗಳ ಒಂದು ಗುರಿಯಾಗಿದೆ. … ಸಮಾಜದಲ್ಲಿ ನಿಮ್ನ ಜಾತಿ ಮತ್ತು ನಿಮ್ನ ವರ್ಗ… ಅತ್ಯಂತ ಶೋಷಿಸಲ್ಪಟ್ಟ ವರ್ಗಗಳು. ಈ ವರ್ಗ… ಇತರರಿಂದ ಪ್ರತ್ಯೇಕಿಸಲ್ಪಟ್ಟಿವೆ. ಆದ್ದರಿಂದ ಸಹಜ… ಸಾರ್ವತ್ರಿಕ ಅಭಿವೃದ್ಧಿ ಯೋಜನೆಗಳು ಇವ… ತಲುಪುವುದಿಲ್ಲ. ಅದಕ್ಕಾಗಿ ಇವರಿಗಾಗೇ ಪ್ರತ್ಯೇಕ… ಕಲ್ಯಾಣಯೋಜನೆಗಳು ನಡೆಯುತ್ತಿವೆ. ಈ ಕ… ಯೋಜನೆಗಳಲ್ಲಿ ಕೇಂದ್ರಕ್ಕೆ ಸಂಬಂಧಿಸಿದಂತೆ ಮೆ… ನಂತರದ ಸ್ಕಾಲರ್‌ಷಿಪ್ ನೀಡಿಕೆ, ಪಬ್ಲಿಕ್ ಸರ್… ಉದ್ಯೋಗಗಳಿಗೆ ತರಬೇತಿ ನೀಡಿಕೆ, ಹೊರರ… ಉನ್ನತ ಶಿಕ್ಷಣ ಸ್ಕಾಲರ್‌ಷಿಪ್ ನೀಡಿಕೆ, ಸ್ಪರ್ಧಾ… ಪರೀಕ್ಷಾ ತರಬೇತಿ ಕೇಂದ್ರ ತೆರೆಯುವುದು, ಬುಡ… ಜನಾಂಗಗಳ ಸಂಶೋಧನಾ ಕೇಂದ್ರ, ಸಹಕಾರಿ … ತೆರೆಯುವುದು ಸೇರಿವೆ. ಹಾಗೆಯೇ ರಾಜ್ಯಕ್ಕೆ ಸಂ… ಸಿದಂತೆ ಶೈಕ್ಷಣಿಕವಾಗಿ ಮೆಟ್ರಿಕ್ ಮೊದಲ ಸ್ಕಾ… ಷಿಪ್, ಫೀಜುಮಾಫಿ, ಸ್ಟೈಫಂಡ್ ನೀಡುವುದು… ಕಟ್ಟಡ, ವಿದ್ಯಾರ್ಥಿನಿಲಯ ತೆರೆಯುವುದು … ಆರ್ಥಿಕವಾಗಿ ಭೂಮಿ, ಸೈಟು, ವಸತಿ, ಎತ್ತು, … ಹಂದಿ, ಕುರಿ, ಬೀಜ, ಕುಡಿಯುವ ನೀರಿನ ವ್ಯ… ಆಸ್ಪತ್ರೆ—ಇತ್ಯಾದಿ ಸೇರಿವೆ.

## ...ೀವಂತ ದಹನ

### ...ನೆ ಆಸ್ಫೋಟ; ಹಸುಳೆಯನ್ನೂ ಬಿಡಲಿಲ್ಲ

...ರ್ 24 ರಂದು ರಾತ್ರಿ ನಡೆದ ಘಟನೆ ಇಷ್ಟು.
... ಸಾಯಂಕಾಲ ಸುಮಾರು ಏಳು ಘಂಟೆಯ
...ಗೆ ಅಡಿಯಾರ ಒಂದು ಗುಂಪು ಜಹಾದ ಅಂಗ-
...ಗ್ಗಿ ಅವರ ಮಾಲೀಕನನ್ನು ಹಾಗೂ ಹರಿಜನ
...ಕನೊಬ್ಬನನ್ನು ಹೊರಗೆಳೆದು ಹತ್ತಿರದಲ್ಲಿದ್ದ
...ನುಜಂನ ಮನೆಗೆ ಎಳೆದೊಯ್ಯಲಾಯಿತು.
... ಹರಿಜನರು ನಂತರ ಅವರನ್ನು ಬಿಡಿಸಿದರು.
...ರು ರಾತ್ರಿ 10 ಘಂಟೆಯ ವೇಳೆಗೆ ಒಂದು ದೊಡ್ಡ
...ಶ ಆಸ್ಫೋಟ ಎಲ್ಲೆಲ್ಲೂ ಕೇಳಿಬಂತು. ಎಲ್ಲರೂ
...ತ್ತಿದ್ದಂತೆ ಲಾರಿ, ಟ್ರಕ್ಕುಗಳು ಜನರನ್ನು ತುಂಬಿ
... ಹರಿಜನ ಕೇರಿಯನ್ನು ಮೂರು ದಿಕ್ಕಿನಿಂದಲೂ

## ೧೯೬೮ರ ಕಿಲ್ವಮಣಿ ದುರಂತದ ನೆನಪು

ಸುತ್ತುವರಿಯಲಾರಂಭಿಸಿದವು. ಜನ ಕಂಡಲ್ಲಿ ಓಡ ಲಾರಂಭಿಸಿದರು. ಬಹುತೇಕ ಮಹಿಳೆಯರು ಹತ್ತಿರದಲ್ಲಿ ಇದ್ದ, ಇದ್ದುದರಲ್ಲಿ ಸ್ವಲ್ಪ ದೊಡ್ಡದಾದ ರಾಮಣ್ಣನ ಗುಡಿಸಿಲಿನಲ್ಲಿ ಆಶ್ರಯ ಪಡೆಯಲಾರಂಭಿಸಿದರು.

ಲಾರಿ, ಟ್ರಕ್‌ಗಳಲ್ಲಿದ್ದ ನೂರಾರು ಜನ ಒಂದು ಕೈಯಲ್ಲಿ ಕುಡುಗೋಲು, ಮಚ್ಚು. ಕತ್ತಿಯನ್ನು ಹಿಡಿದು ಮನೆ ಮನೆಗೂ ಬೆಂಕಿಹಚ್ಚಲಾರಂಭಿಸಿದರು ಹೆಂಗಸರು ಮಕ್ಕಳನ್ನೊಳಗೊಂಡ ಆ ರಾಮಣ್ಣನ ಗುಡಿಸಲೂ ಬೆಂಕಿಗೆ ಆಹುತಿಯಾಯಿತು. ಕೊನೆಯಲ್ಲಿ ಯಜ್ಞ ಕುಂಡದಿಂದ ಪಾರಾದ ಕುಂಜಮ್ಮ ಬೆಂಕಿ ಹಚ್ಚಿದಾಗ ಅದೇ ಗುಡಿಸಲಿನಲ್ಲಿದ್ದಳು. ಹೆಂಗಸರು ಭಯದಿಂದ ನಡುಗುತ್ತ ಕುಗ್ಗಿಕುಳಿತಿದ್ದರು. ಆಕೆ ಇಲ್ಲಿಂದ ಪಾರಾಗಲು ಸಾಧ್ಯವೇ ಎಂದು ಹೊರಗೆ ಇಣುಕುತ್ತಿದ್ದಳು. ಆಗ ಸಮೀಪದಲ್ಲಿದ್ದ ಒಬ್ಬಾತ ಆಕೆಯ ಕತ್ತು ಹಿಡಿದು ಹೊರಗೆಳೆದು ಮುಂಗೈಯನ್ನು ಚೂರಿಯಿಂದ ಇರಿದು ಸೀರೆಯನ್ನು ಬಿಚ್ಚಿ, ಬೆತ್ತಲೆಮಾಡಿ, ಒದ್ದು. ಹೊರದಬ್ಬಿದ. ದೂರದಲ್ಲಿ ಬಿದ್ದ ಆಕೆ ಒಳಗೆ ಬೆಂಕಿಯಲ್ಲಿ ಸಿಕ್ಕು ಧಗಧಗನೆ ಬೇಯುತ್ತಿದ್ದ ಹೆಣ್ಣುಗಳ ಆಕ್ರಂದನವನ್ನು ಕೇಳಬಲ್ಲವಳಾಗಿದ್ದಳು. ಬಿದ್ದಲ್ಲಿಂದಲೇ ಆಕೆ ಕಂಡ ದೃಶ್ಯ— ಹಸುಳೆಯೊಂದು ಬೆಂಕಿಯ ತಾಪವನ್ನು ತಾಳಲಾರದೆ ಹೊರಬಂದಾಗ ಅಲ್ಲಿದ್ದ ಜನ ಆ ಮಗುವಿನ ಕತ್ತು ಮುರಿದು ಮತ್ತೆ ಬೆಂಕಿಯಲ್ಲಿ ಬಿಸಾಡಿದುದು.

( ಮುಂದಿನ ಪುಟಕ್ಕೆ )

## ...ತ್ತು ದಲಿತ ವರ್ಗ

### ...ರ್ಗ; ಯೋಜನಾ ವೆಚ್ಚ

...ರ್ಷಿಕ ಯೋಜನೆಯ ಅವಧಿಯಲ್ಲಿ ದಲಿತವರ್ಗ
...ಕ್ಕಾಗಿ ವೆಚ್ಚ ಮಾಡಿದ ಮೊಬಲಗು ಎಷ್ಟು?
...ಬಸದ ಪಕ್ಕದಲ್ಲಿರುವ ಅಂಕಿ ಅಂಶಗಳನ್ನು
... ಒಟ್ಟು ಯೋಜನೆಯ ಶೇಕಡ 1 ರಷ್ಟನ್ನು
...ವೆಚ್ಚಮಾಡಲಾಗಿದೆ. 1971 ರ ಜನಗಣತಿ
...8 ಕೋಟಿ ನಿಮ್ನ ಜಾತಿ, 3 8 ಕೋಟಿ ನಿಮ್ನ
...ಜನಸಂಖ್ಯೆ. ಈ ಜನಾಂಗಗಳು ಒಟ್ಟು ಜನ
...ಲ್ಲಿ ಶೇಕಡ 20 ರಷ್ಟಾಗುವುದು. ನಿಮ್ನ ಜಾತಿ
...ಯೋಜನಾ ಮೀಸಲು ಹಣದಲ್ಲಿ ಶೇಕಡ 60
... ಶೈಕ್ಷಣಿಕ ಕಾರ್ಯಕ್ಕೆ ವಿನಿಯೋಗಿಸಲಾಗಿದೆ.
...ಅದರರ್ಥ—ನಿಮ್ನ ಜಾತಿಯವರ ಆರ್ಥಿಕಾ-
...ಾಗಿ ವರ್ಷಕ್ಕೆ ತಲಾ 13 ಪೈಸೆಗಳನ್ನು ವೆಚ್ಚ
...ಗಿದೆ. ನಿಮ್ನ ವರ್ಗಗಳ ಆರ್ಥಿಕಾಭಿವೃದ್ಧಿಗಾಗಿ
...ಕ್ಕೆ ಮೀಸಲಾದ ಒಟ್ಟು ಮೊತ್ತದಲ್ಲಿ ಶೇಕಡ
...ನ್ನು ವೆಚ್ಚಮಾಡಲಾಗಿದ್ದು, ಇದು ವರ್ಷಕ್ಕೆ
...ಡು ರೂಪಾಯಿಗಳಾಗುತ್ತವೆ.
...ಶಕದಲ್ಲಿ ನಾನಾ ರೀತಿಯ ಶೈಕ್ಷಣಿಕ ನೆರವಿ
... ಈ ಪಂಗಡಗಳಲ್ಲೂ ಅದರಲ್ಲೂ ನಿಮ್ನ ಜಾತಿ
... ವಿದ್ಯಾಪ್ರಸಾರ ಸಾಕಷ್ಟು ಹರಡಿದೆ. 1961-
...ವೆ ವಿದ್ಯಾಪ್ರಸಾರವು ನಿಮ್ನ ಜಾತಿಯವರಲ್ಲಿ
...0.8 ರಿಂದ 14.7 ಕ್ಕೂ, ನಿಮ್ನ ವರ್ಗದವರಲ್ಲಿ
...ದ 11.8 ಕ್ಕೂ ಹೆಚ್ಚಿದೆ. 1971ರ ಗಣತಿಯಂತೆ
...ಂದ ಅಕ್ಷರಸ್ಥರ ಶೇಕಡಾವಾರು 29.4

### ...ಸೇರುವವರು— ಬಿಡುವವರು

...ಯನ್ನು ಪರಿಗಣಿಸಿದರೆ ನಿಮ್ನಜಾತಿ, ನಿಮ್ನ
...ದ ಶಾಲೆಗೆ ಸೇರುವವರು ಕಮ್ಮಿಯೇ. ಹೀಗೆ
...ವಿದ್ಯಾರ್ಥಿಗಳಲ್ಲಿ ಬಹುಪಾಲು ಓದನ್ನು ನಡು
...ಬಿಡುವರು. ಉಚಿತ ಶಿಕ್ಷಣವಿದ್ದರೂ ಕೂಡ
... ಬಹಳ ಆಗುತ್ತದೆ. [ಈ ಪಂಗಡಗಳ ತಂದೆ
...ಗೆ ಅವರ ಮಕ್ಕಳು ಓದುವುದು ಆರ್ಥಿಕವಾಗಿ
...ವುದರಿಂದ ಈ ರೀತಿ ಆಗುತ್ತದೆ. ಈ ಜನಾಂಗ
...ಲ್ಪ ಮುಂದುವರಿದಿರುವ ಮಹಾರಾಷ್ಟ್ರದಲ್ಲೂ

ಸಾವಿರಕ್ಕೆ ಇಬ್ಬರು ಮಾತ್ರ ಉನ್ನತ ಶಿಕ್ಷಣಕ್ಕೆ ಬರುವರು. ಹಳ್ಳಿಗಾಡಿನ ಭೂಹೀನ ಕೂಲಿಗಳ ಮಕ್ಕಳು ಮಾಧ್ಯಮಿಕ ಶಾಲೆಯನ್ನು ಮುಟ್ಟುವುದೂ ದುಸ್ತರ. ಉದಾಹರಣೆಗೆ ಶಾಲಾ ಸೇರ್ಪಡೆ ಅಂಕಿ ಅಂಶಗಳನ್ನು ನೋಡಿರಿ.

ಈ ಜನಾಂಗಗಳಿಗೆ ಸರ್ಕಾರಿ ನೌಕರಿಯಲ್ಲಿ ಮೀಸಲಾತಿ ನೀಡಲಾಗಿದೆ. ಅಷ್ಟಿದ್ದೂ, ಕ್ಲಾಸ್ I ಕ್ಲಾಸ್ II ಹುದ್ದೆಗಳಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಈ ಪಂಗಡಗಳ ಜನರಿಲ್ಲ. ನಿಮ್ನ ವರ್ಗವಂತು ಬಹಳ ಕಮ್ಮಿ. ಈ ಜನಾಂಗಗಳಿಗಾಗಿ ಉದ್ಯೋಗ ತರಬೇತಿ ಶಿಬಿರಗಳನ್ನು ತೆರೆಯೂ ಈ ರೀತಿಯಾಗುತ್ತಿದೆ. ವಿಶೇಷ ರೀತಿಯಿಂದಾಗಿ ಈ ಪಂಗಡಗಳು ಸಾಮಾಜಿಕ ಆರ್ಥಿಕ ರಂಗದಲ್ಲಿ ಭಾಗವಹಿಸಲು ಅವಕಾಶ ಇದ್ದರೂ ಅವರ ಪ್ರಾತಿನಿಧ್ಯವು ಪ್ರಮುಖ ಸ್ಥಾನಗಳಲ್ಲಿ ಕಡೆಗಣಿಸಲ್ಪಟ್ಟಿದೆ ಮತ್ತು ಈ ಎಲ್ಲ ಬಗೆಯ ಸಾಮರ್ಥ್ಯ ಪಡೆದಿದೆ. ಉಳಿದ ದೊಡ್ಡ ಸಮುದಾಯವು ಆರ್ಥಿಕ ಮುಗ್ಗಟ್ಟಿನಿಂದಾಗಿಯೇ ಈ ಅನುಕೂಲತೆಗಳನ್ನು ಪಡೆಯುವಲ್ಲಿ ವಂಚಿತವಾಗುತ್ತಿದೆ. ಇದೇ ಈ ಯೋಜನೆಗಳ ಮಿತಿಯೂ ಆಗಿದೆ.

[ಜನವರಿ 26, 1975ರ 'ಯೋಜನಾ' ಪತ್ರಿಕೆಯಲ್ಲಿ ಸುಲಭ ಬ್ರಹ್ಮ ಅವರು ಬರೆದ 'ಷೆಡ್ಯೂಲ್ಡ್ ಕ್ಯಾಸ್ಟ್ ಅಂಡ್ ಷೆಡ್ಯೂಲ್ಡ್ ಟ್ರೈಬ್' ಲೇಖನದಿಂದ ಆಯ್ದ ಭಾಗಗಳು.]

### ಕಲ್ಯಾಣ ಯೋಜನೆಗಳಿಗಾಗಿ ವೆಚ್ಚ

| | ನಿಮ್ನ ಜಾತಿ | ನಿಮ್ನ ವರ್ಗ | ಸಾರ್ವತ್ರಿಕ |
|---|---|---|---|
| ಒಂದನೆಯ ಯೋಜನೆ | 6.97 ಕೋಟಿ | 17.37 ಕೋಟಿ | 1960 ಕೋಟಿ |
| ಎರಡನೆಯ ಯೋಜನೆ | 27.88 ಕೋಟಿ | 40.61 ಕೋಟಿ | 4672 ಕೋಟಿ |
| ಮೂರನೆಯ ಯೋಜನೆ | 38.29 ಕೋಟಿ | 52.08 ಕೋಟಿ | 8577 ಕೋಟಿ |
| 1966–69 | 31.33 ಕೋಟಿ | 34.25 ಕೋಟಿ | [illegible]625 ಕೋಟಿ |
| 1969–74 | 142.38 ಕೋಟಿ | —— | 15902 ಕೋಟಿ |

### ಶಾಲೆ ಸೇರ್ಪಡೆ ಅಂಕಿ–ಅಂಶಗಳು

| | | ನಿಮ್ನ ಜಾತಿ | ನಿಮ್ನ ವರ್ಗ | ಇತರರು |
|---|---|---|---|---|
| ಒರಿಸ್ಸಾ | ಪ್ರಾಥಮಿಕ | 66.0 | 47.9 | 67.0 |
| (1968–69) | ಮಾಧ್ಯಮಿಕ | 12.6 | 7.2 | 24.0 |
| | ಪ್ರೌಢ | 9.7 | 5.7 | 11.5 |
| ಮಹಾರಾಷ್ಟ್ರ | ಪ್ರಾಥಮಿಕ | 64.0 | | 90.0 |
| (1972–73) | ಮಾಧ್ಯಮಿಕ | 16.0 | | 45.0 |
| ರಾಜಸ್ಥಾನ | ಪ್ರಾಥಮಿಕ | 35.2 | 32.1 | 64.5 |
| | ಮಾಧ್ಯಮಿಕ | 12.9 | 7.8 | 31.0 |

### ಕೇಂದ್ರ ಸರ್ಕಾರದ ನೌಕರರಲ್ಲಿ ಪ್ರಾತಿನಿಧ್ಯ (1971)

| ವರ್ಗ | ನಿಮ್ನ ಜಾತಿ | ನಿಮ್ನ ವರ್ಗ |
|---|---|---|
| ಕ್ಲಾಸ್ I | ಶೇ. 2.85 | ಶೇ. 0.41 |
| ಕ್ಲಾಸ್ II | ಶೇ. 4.06 | ಶೇ. 0.43 |
| ಕ್ಲಾಸ್ III | ಶೇ. 9.59 | ಶೇ. 1.70 |
| ಕ್ಲಾಸ್ IV | ಶೇ. 18 | ಶೇ. 3.65 |

( ಹಿಂದಿನ ಪುಟದಿಂದ )

ಬಾಲಯ್ಯ ಎಂಬಾತ ಈ ಗಲಭೆಯ ಮಧ್ಯೆ ತಪ್ಪಿಸಿಕೊಂಡು ಮರವನ್ನೇರಿ ಕುಳಿತಿದ್ದನು. ಆತ ಕಂಡ ದೃಶ್ಯ ಜನರು ಬಂದೂಕಗಳಿಂದ ಸುತ್ತಲೂ ಗುಂಡು ಹಾರಿಸುತ್ತಿದ್ದರು. ನಾಯ್ಡುನ ಸಂತೋಷದ ಅಲೆ ಆ ಕೇರಿಯಲ್ಲೆಲ್ಲಾ ನಲಿಯುತ್ತಿತ್ತು. ಅವನೂ ಅಲ್ಲಿಯೇ ನಿಂತು ಗುಂಡು ಹಾರಿಸುತ್ತಿದ್ದನು. ನಾಯುಡು ಹಕ್ಕಿಗಳನ್ನು ಕೊಲ್ಲುವ ಬಂದೂಕನ್ನು ತಂದಿದ್ದನು. ಇಲ್ಲವಾಗಿದ್ದರೆ ಈ ಉಳಿದಿರುವ ಕೆಲವರೂ ಉಳಿಯುತ್ತಿರಲಿಲ್ಲ.

ಹಳ್ಳಿಯ ಪರಿಸ್ಥಿತಿ ತೀರ ಪ್ರಕೋಪಕ್ಕೆ ಹೋದಾಗ ಸಾಯದೇ ಬದುಕಿದ ಹರಿಜನರು ಮುಖ್ಯಮಂತ್ರಿಗಳಿಗೆ, ಪ್ರಧಾನಕಾರ್ಯದರ್ಶಿಗಳಿಗೆ ಹಾಗೂ ಐ ಜಿ ಪಿಯವರಿಗೆ ಸಹಾಯ ನೀಡಿ ಎಂದು ಬೇಡಿಕೊಂಡಾಗಲೂ ಯಾವುದೇ ಸಹಾಯ, ಸಹಾನುಭೂತಿ ದೊರೆಯಲಿಲ್ಲ. ಬದಲಾಗಿ ಪೊಲೀಸರು ಜಮೀನುದಾರರ ಕೈಗೊಂಬೆಗಳಾಗಿ ದುಷ್ಟ ಮಕ್ಕಳಂತೆ ವರ್ತಿಸಿದರು.

ಸ್ಥಳೀಯ ಪೊಲೀಸರು ಈ ಘಟನೆಯಲ್ಲಿ ಜಮೀನುದಾರರಿಗೆ ಸಹಾಯಮಾಡಿದ್ದಾರೆಂದು ನಂಬಲಾಗಿದೆ. ಈ ಪ್ರಕರಣ ರಾತ್ರಿ 10ರ ವೇಳೆಗೆ ನಡೆದಿತ್ತು. ಆದರೆ ಪೊಲೀಸರು ಬಂದದ್ದು ಮರುದಿನ. ಅಲ್ಲಿದ್ದವರ ಅಭಿಪ್ರಾಯದಂತೆ ಆ ದಿನ ರಾತ್ರಿಯೆಲ್ಲ ಪೊಲೀಸುವಾಹನ ಸವರ್ಣ ಹಿಂದುಗಳ ಗಲ್ಲಿಯಲ್ಲಿ ಓಡಾಡುತ್ತಿದ್ದಿತು. ಹರಿಜನರು ವರದಿಯನ್ನು ಒಪ್ಪಿಸಲು ರಾತ್ರಿ ಪೊಲೀಸು ಠಾಣೆಗೆ ಹೋದಾಗ ಅಲ್ಲಿ ನಾಯುಡು ಕುಳಿತಿದ್ದುದನ್ನು ಕಂಡರು. ಮರುದಿನ ಧಾವಿಸಿದ ಪೊಲೀಸರು ಹಳ್ಳಿಯನ್ನು ಸೀಲ್‌ಮಾಡಿ ಅಲ್ಲಲ್ಲಿ ಸಿಕ್ಕಿದ ನಾಲ್ಕಾರು ಹರಿಜನರನ್ನು ಬಂಧಿಸಿ ಎಳೆದೊಯ್ದರು. ಅವರನ್ನು ಮೂರು ದಿನಗಳವರೆಗೆ ಬಂಧನದಲ್ಲಿಟ್ಟು ಯಾರ ಸಂಪರ್ಕವೂ ಇಲ್ಲದಂತೆ ಮಾಡಿ ಅವರಿಂದ ತಮಗೆ ಅನುಕೂಲವಾದ ಹೇಳಿಕೆಯನ್ನು ಬರೆಸಿಕೊಂಡರು.

ಈ ಅಮಾನುಷ ಕೃತ್ಯವು ಬಹುಪಾಲು ಗೋಪಾಲಕೃಷ್ಣ ನಾಯುಡು, ತಂಜಾವೂರು ಜಿಲ್ಲಾ ವ್ಯವಸಾಯ ಇಲಾಖೆಯ ಕಾರ್ಯದರ್ಶಿಯಾಗಿರುವ ಜಿ. ವೀರಯ್ಯ ಎಂಬುವವರಿಂದ ಪೂರೈಸಲ್ಪಟ್ಟಿದೆ. ಜೊತೆಗೆ ಐಶ್ವರ್ಯವಂತ ಭೂಮಾಲೀಕರಾದ 23 ಜನ ಮಿರಾಸ್‌ದಾರರೂ ಇದ್ದಾರೆ. ಈ ಕಾರ್ಯವು ಪೂರ್ವಪ್ರೇರಣೆಯಿಂದ ಭತ್ತ ಬೆಳೆಗಾರರ ಸಂಘದಿಂದ ನಿರ್ಧರಿಸಲ್ಪಟ್ಟಿತು.

ಆದರೆ ಸರ್ಕಾರ ಮಾತ್ರ ಈ ಅಮಾನುಷ ಕೃತ್ಯಕ್ಕೆ ಕಾರಣರಾದವರನ್ನು ಶಿಕ್ಷಿಸುವ ಜವಾಬ್ದಾರಿ ತೆಗೆದುಕೊಳ್ಳಲಿಲ್ಲ. ಐದು ವರ್ಷಗಳ ನಂತರ ಈ ಕೊಲೆಯ ಸಂಬಂಧವಾಗಿ ಬಂಧಿಸಲ್ಪಟ್ಟ ಹಿಂದೂ ಜಮೀನ್ದಾರರನ್ನು ಬಿಡುಗಡೆ ಮಾಡಲಾಯಿತು. ಆ ಸಂದರ್ಭದಲ್ಲಿ ನ್ಯಾಯಾಧೀಶರು "ಈ ಪ್ರಕರಣದ ಸಂಬಂಧವಾಗಿ ಶಂಕಿಸಲಾದ 23 ಮಂದಿಗಳೂ ನಿರಾಸದಾರ. ಆಶ್ಚರ್ಯವೆಂದರೆ ಇವರಲ್ಲಿ ಬಹಳಷ್ಟು ಜನ ಐಶ್ವರ್ಯವಂತರೂ, ಆಗಿರುವರು. ಅಲ್ಲದೆ ಗೋಪಾಲಕೃಷ್ಣ ನಾಯುಡು ಸ್ವಂತ ಕಾರನ್ನು ಹೊಂದಿದ್ದಾನೆ. ಇವರು ಸ್ವತಃ ಅಲ್ಲಿಗೆ ಹೋಗಿ ದುರಂತವನ್ನು ನಡೆಸಿದರು ಎಂದು ಹೇಳಿದರೆ ನಂಬಲು ಅಸಾಧ್ಯ" ಎಂದು ತೀರ್ಪನ್ನು ಕೊಟ್ಟರು. ಅಲ್ಲದೆ ಇದಕ್ಕೆ ಸಂಬಂಧಿಸಿದ ಇನ್ನೊಂದು ಕೇಸಿನಲ್ಲಿ ಅಂದರೆ ಜಮೀನುದಾರರ ಪರವಾಗಿದ್ದ ಫಕೀರಿ ಎಂಬುವನ ಕೊಲೆಯ ಪ್ರಕರಣದಲ್ಲಿ ಸೇರಿಸಲ್ಪಟ್ಟಿದ್ದ ಎಂಟು ಮಂದಿ ಹರಿಜನರನ್ನು ಹಲವು ತರದ ಶಿಕ್ಷೆಗೆ ಗುರಿಪಡಿಸಿದ್ದಲ್ಲದೆ ಒಬ್ಬನಿಗೆ ಮರಣದಂಡನೆಯನ್ನು ವಿಧಿಸಲಾಯಿತು.

—ಇಂದಿರಾ ಕೃಷ್ಣಪ್ಪ

(ಟೈಮ್ಸ್ ವೀಕ್ಲಿ ಕೃಪೆ)

## ಅಳಲು

## ಈ ಶೋಷಣೆಗೆ ಕೊನೆ ಎಂದು?

ಸರ್ಕಾರ ಹರಿಜನ ಗಿರಿಜನರಿಗೆ ಸೌಲಭ್ಯ ಸವಲತ್ತುಗಳನ್ನು ನೀಡುತ್ತಿದೆ. ಅವರು ಉದ್ಧಾರವಾಗುತ್ತಿದ್ದಾರೆ ಎಂಬ ಮಾತು ಈಗ ಎಲ್ಲೆಲ್ಲಿ ಕೇಳಿಬರುತ್ತಿದೆ. ಆದರೆ ಈ ಉದ್ಧಾರದ ಮಾತು ಮಾತಾಗಿಯೆಯೇ ವಿನಃ ಪೂರ್ತಿ ಕೃತಿಗಿಳಿದಿಲ್ಲ. ಇದಕ್ಕೆ ಈ ಕೆಳಗಿನ ಸಂಗತಿಗಳೇ ಸಾಕ್ಷಿ:

ಮೈಸೂರು ಜಿಲ್ಲೆಯ ಪಿರಿಯಾಪಟ್ಟಣ ತಾಲ್ಲೂಕಿನ, ಹೊನ್ನಾಪುರ, ಚಾಮರಾಯನ ಕೋಟೆ, ಕಣಗಾಲು, ಸೂಳೆಕೋಟೆ—ಇನ್ನೂ ಹಲವಾರು ಸುತ್ತಮುತ್ತಲಿನ ಹಳ್ಳಿಗಳಲ್ಲಿ ವಾಸಿಸುವ ಹರಿಜನರ ಸ್ಥಿತಿ ತೀರಾ ಶೋಚನೀಯವಾದುದು. ಹೋಟೆಲ್‌ಗೆ ಹೋದರೆ ಸೂರಿನ ಆಚೆಯೇ ನಿಂತು ಅವರಿಗಾಗೆ ಇಟ್ಟಿರುವ ಕೊಳಕು ಸಿಲವಾರದ ಕಪ್ಪಿನಲ್ಲಿ ಕಾಫಿ ಹುಯ್ಯಿಸಿಕೊಂಡು ಕುಡಿದು ಬರಬೇಕು. ಕುಡಿದ ಕಾಫಿಗೆ ದುಡ್ಡನ್ನೂ ಸಹ ಹೋಟೆಲ ಯಜಮಾನನ ಕೈಗೆ ಹಾಕುವಂತಿಲ್ಲ. ಪಕ್ಕದ ಜಗುಲಿಯ ಮೇಲಿಟ್ಟ ನಂತರ ಯಜಮಾನ ಅದನ್ನು ತೆಗೆದುಕೊಳ್ಳಬೇಕು. ದೇವಸ್ಥಾನಗಳಿಗಂತೂ ಪ್ರವೇಶವೇ ಇಲ್ಲ. (ಆದರ ಆಗತ್ಯವೂ ಇಲ್ಲ ಅನ್ನಿ) ಹರಿಜನರೆಂದರೆ ತಮ್ಮ ಗುಲಾಮರೆಂದೇ ಭಾವಿಸುವ ಈ ಊರುಗಳ ಸವರ್ಣೀಯರು ಅವರನ್ನು ತೀರಾ ತುಚ್ಛೀಕರಿಸಿ ಮಾತನಾಡುತ್ತಾರೆ. ಹೆಣ ಹೂಳಲು ಹರಿಜನರೇ ಗುಂಡಿ ಮಾಡಬೇಕು. ಸತ್ತ ದನ ಹೊರಲೂ ಅವರೇ ಬರಬೇಕು. ಒಳ್ಳೆಯ ಕೆಟ್ಟದರ ಎಲ್ಲಾ ರೀತಿಯ ಕೊಳಕು ಕೆಲಸಕ್ಕೆಲ್ಲ ಇವರೇ ಬೇಕು. ಆದರೂ ಇವರು ಕನಿಷ್ಠ ಮನುಜರು. ಪಂಚಾಯ್ತಿ ಮೆಂಬರ್ ಆದ ಹರಿಜನ ವ್ಯಕ್ತಿಯೂ ಪಂಚಾಯ್ತಿಯ ದಿನ ಪಂಚಾಯ್ತಿ ಆಫೀಸಿನ ಹೊರಗೆ ಬಾಗಿಲಲ್ಲಿ ಕೂರಬೇಕು.

ಇಷ್ಟೆಲ್ಲಾ ಶೋಷಣೆ ಕಣ್ಣೆದುರು ನಡೆಯುತ್ತಿದ್ದರೂ ಅವುಗಳತ್ತ ಸಂಬಂಧಪಟ್ಟವರು ಕೊಂಚವೂ ಗಮನ ಹರಿಸದಿರುವುದು ಶೋಚನೀಯ. ಹರಿಜನೋದ್ಧಾರ ಅಂತ ಹೇಳುವ ಸರ್ಕಾರ ಇಂಥದನ್ನು ಸರಿಪಡಿಸದಿದ್ದರೆ ಹರಿಜನೋದ್ಧಾರದ ಮಾತು ಬರೀ ಸುಳ್ಳಾಗುತ್ತದೆ.

— ಎಚ್. ಎಚ್. ಆಂಜನೇಯ

ಹೊನ್ನಾಪುರ, ಪಿರಿಯಾಪಟ್ಟಣ ತಾಲ್ಲೂಕು

## ಮಾದರಿ ಅಂತರ್ಜಾತಿ ವಿವಾಹ

ಹುಡುಗ ಹರಿಜನರವ ಅಂದರೆ ಹೊಲೆಯ ಅವಿದ್ಯಾವಂತ ಜತೆಗೆ ಬಡವ ಹೆಸರು ಸಂ[illegible]ರಪ್ಪ

ಹುಡುಗಿ ಲಿಂಗಾಯಿತರವಳು ಅಂದರೆ ಸವರ್ಣೀಯಳು ವಿದ್ಯಾವಂತೆ ಐ[illegible]ವಂತ ಹೆಸರು ಗಂಗಮ್ಮ,

ಈ ಇಬ್ಬರೂ ಕಳೆದ ಕೆಲವು ತಿಂಗಳ ಹಿಂದೆ ಮದುವೆಯಾದರು ಮಾನವೀಯತೆಯನ್ನು ನಂಬಿದ ಇವರು ಮದುವೆಯಾದಾಗ ಹಲವಾರು ಹಿಂದೂ ರಾಕ್ಷಸರು ಇವರಿಗೆ ಕಿರುಕುಳ ಕೊಟ್ಟರು ಆದರೆ ಮಾನವರಾದ ಇವರು ಬಗ್ಗಲಿಲ್ಲ ಮಾನವೀಯತೆಗಾಗಿ ಹೋರಾಡಿದರು ವಿಜಯಿಗಳಾದರು ಈಗ ಸುಖವಾಗಿ ಬಾಳುತ್ತಿದ್ದಾರೆ

ಇದು ನಡೆದದ್ದು ಚಿತ್ರದುರ್ಗ ತಾಲೂಕಿನ ಸೊಂಡನಹಳ್ಳಿ ಗ್ರಾಮದಲ್ಲಿ ಅಂತರ್ಜಾತಿಯ ವಿವಾಹವಾದ ಇವರಿಗೆ ಸರ್ಕಾರ ಮೂರು ಸಾವಿರ ರೂಪಾಯಿಗಳ ಬಹುಮಾನ ನೀಡಿದೆ

ಸಮಾಜ ಸುಧಾರಕರು, ಸಮಾಜವಾದಿಗಳು ಅಂತ ಬಡಕೊಳ್ಳುವಷ್ಟುಜನ ಇವರಿಂದ ಪಾಠ ಕಲಿಯಬೇಕು

## ಹೆಂಡದಂಗಡಿ ಸ್ಥಳ ಬದಲಿಸಿ

ಸುಮಾರು ಐದಾರು ವರ್ಷಗಳಿಂದ ಮಳವಳ್ಳಿಯ ಮೂರು ಹರಿಜನ ಕೇರಿಗಳ ನಡುವೆ ಲೈಸನ್ಸ್ ಇಲ್ಲದೆ ಪ್ರಭಾವಿತ ವ್ಯಕ್ತಿಯೊಬ್ಬರು ಹೆಂಡದ ಅಂಗಡಿಯೊಂದನ್ನಿಟ್ಟು ಹಣದ ಸುಲಿಗೆ ನಡೆಸುತ್ತಿದ್ದಾರೆ. ಸುತ್ತಮುತ್ತಲಿನ ಹರಿಜನರು, ಪಡ್ಡೆ ಹೈಕಳು ಕುಡಿಯುವ ಚಟವನ್ನು ಬೆಳೆಸಿಕೊಂಡಿದ್ದಾರೆ. ಹಬ್ಬದ ದಿನಗಳ ಒಂದು ಸೀಸೆ ಹೆಂಡವೂ ಕೂಡ ಅನೇಕರನ್ನು ಅಲ್ಲಿಯೇ ಮಲಗಿಸಿ, ಮತ್ತೆ ಕೆಲವರು ತಮ್ಮ ಮನೆಗಳನ್ನು ತಲುಪಲು ಗಂಟೆಗಟ್ಟಲೆ ತೆಗೆದುಕೊಂಡ ಅನುಭವ ದಿನಗಳಿವೆ. ಅಲ್ಲದೆ ಹೆಂಡದ ಅಂಗಡಿಯಿಂದ ತಮ್ಮ ಕೇರಿಗೆ ಬರುವ ದಾರಿಯಲ್ಲಿ ಕೆರೆಯೊಂದಿದೆ. ಆ ಕೆರೆಯ ದಡದಮೇಲೆ ಹಗಲು-ರಾತ್ರಿಯೆನ್ನದೆ ಕುಡಿದು ನಟನೆಮಾಡಿ ಬರುತ್ತಿರುವಾಗ ಪಕ್ಕದ ತಿಪ್ಪೆಗುಂಡಿ, ಕೆರೆ, ಹಳ್ಳಕೊಳ್ಳಗಳಿಗೆ ಬಿದ್ದವರೇನು ಕಡಿಮೆ ಇಲ್ಲ.

ಹರಿಜನರ ಕೇರಿಗಳ ಪಕ್ಕದಲ್ಲಿ ಹೆಂಡದ ಅಂಗಡಿಗಳು ಇರುವುದಕ್ಕೆ ಸರ್ಕಾರದ ವಿರೋಧವಿರುವುದರಿಂದ ಸಂಬಂದಪಟ್ಟ ಅಧಿಕಾರಿಗಳು ಮತ್ತು ಸರ್ಕಾರ ಇತ್ತ ಕಡೆ ಗಮನಿಸಿ, ಈ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳಲೆಂದು ಆಶಿಸುತ್ತೇನೆ.

—ಎಂ. ಎನ್. ನಾರಾಯಣಸ್ವಾಮಿ

ಮಳವಳ್ಳಿ

# 'ಪಂಚಮ' ಕುರಿತು ಎರಡು ಪತ್ರಗಳು

ಪಂಚಮವು ಯಾವುದೇ ಒಂದು ವ್ಯಾಪಾರಿ ಮನೋಭಾವನೆಯನ್ನು ಹೊಂದದೆ, ಸಮಾಜದಲ್ಲಿ ನಡೆಯುತ್ತಿರುವ ಅನ್ಯಾಯ ಹಾಗೂ ಶೋಷಿತರಿಗೆ ನಿಜವಾಗಿಯೂ ಸಿಗಬೇಕಾದ ನ್ಯಾಯಕ್ಕಾಗಿ ಹೋರಾಡುತ್ತದೆ ಎಂಬುದು ಶೋಷಿತದಿಂದ ಅರಿವಾಗಿದೆ.

ಈ ಪತ್ರಿಕೆಯು ಕೇವಲ ಒಂದು ಜನಾಂಗವನ್ನು ಹಾಗೂ ಅವರ ಸಂಘಟನೆಯನ್ನು ಎತ್ತಿ ಹಿಡಿಯುತ್ತದೆ ಎನ್ನುವ ಕೆಲವು ಓದುಗರ ನೇರ ಆರೋಪ ಸಲ್ಲದ್ದು. ಶೋಷಿತವರ್ಗವು ಸಂಘಟನೆಯಾಗಿ ತಮ್ಮ ಹಕ್ಕು ಬಾಧ್ಯತೆಗಳಿಗಾಗಿ ಹೋರಾಡುವುದಕ್ಕೂ, ಬೇರೆ ಜನಾಂಗದವರು ತಮ್ಮ ಸಂಘಟನೆ ನಡೆಸುವುದಕ್ಕೂ ಬಹುತರಹದ ವ್ಯತ್ಯಾಸವಿದೆ. ಆದರಿಂದ ಸಮಾನತೆ ದೃಷ್ಟಿಯಲ್ಲಿ ಶೋಷಿತವರ್ಗದ ಸಂಘಟನೆ ಇಂದು ಅನಿವಾರ್ಯ ಏಕೆಂದರೆ ದಿನ ನಿತ್ಯವೂ ನಡೆಯುವ ಶೋಷಣೆ ಮತ್ತು ಬಸವಲಿಂಗಪ್ಪನವರ ಪ್ರಕರಣವು ಶೋಷಿತವರ್ಗ ಸಂಘಟನೆಯಾಗದಿದ್ದರೆ ಈ ದೇಶದಲ್ಲಿ ಉಳಿಗಾಲವಿಲ್ಲವೆಂಬುವನ್ನ ಈ ಸ[illegible]ಜ[illegible]ಸಿ ಕೊಟ್ಟಿದೆ

ಆದ್ದರಿಂದ ಮಾನವೀಯ ದೃಷ್ಟಿಯಲ್ಲಿ ಜನತೆಯ ಸಂಕುಚಿತ ಮನೋಭಾವ ಬದಲಾಗಬೇಕಲ್ಲದೆ ಪತ್ರಿಕೆಯೂ ಕೂಡ ಎಲ್ಲಾ ಜನಾಂಗದಲ್ಲಿನ ಶೋಷಿತರ ಮೇಲೆ ನಡೆಯುತ್ತಿರುವ ದಬ್ಬಾಳಿಕೆಯನ್ನು ಪ್ರತಿಭಟಿಸುವ ಸಾಮರ್ಥ್ಯವನ್ನು ಹೊಂದಬೇಕು. ಇಂತಹ ಸಾಮರ್ಥ್ಯವನ್ನೂ ಹಾಗೂ ಮನೋಭಾವನೆಯನ್ನೂ ಜನರಲ್ಲಿ ಉಂಟುಮಾಡಿದರೇನೇ ಪಂಚಮದ ಉದ್ದೇಶ, ಕಾರ್ಯ ಸಫಲವಾದೀತು

—ಶಂಕರರಾವ್
ಮಂಗಳೂರು

ಅಸ್ಪೃಶ್ಯತೆಯನ್ನು ಕೇವಲ ಕಾನೂನಿನ ನೆರವಿನಿಂದ ತೊಡೆದು ಹಾಕುವುದು ಅತಿಯಾದ ತ್ರಾಸದಾಯಕವೆಂದರೆ ಅಂತಹ ಪ್ರಮಾದವೆನಿಸದಿರದು. ಕಾನೂನುಗಳ ರಕ್ಷಣೆಯ ಜೊತೆಗೆ ಹರಿಜನರಲ್ಲಿ ಧೀರೋಧಾತ್ತತೆ ಮತ್ತು ವಿಚಾರಪ್ರಜ್ಞೆ ಬೆಳೆದುಬರುವುದು ಅತಿ ಅವಶ್ಯಕ

ಸಾಮಾಜಿಕ ಗೊಡ್ಡು ಸಂಪ್ರದಾಯಕ್ಕೆ ಸಿಲುಕಿದ ಹರಿಜನರು ಅಸ್ಪೃಶ್ಯಕಾರಕ ಹಾಗೂ ಅಂಥ ಆಚಾರಗಳನ್ನು ಬಿಟ್ಟು ವೈಚಾರಿಕತೆಯನ್ನು ಬೆಳಸಿಕೊಳ್ಳುವುದು ಅತಿ ಅವಶ್ಯಕ. ಈ ವೈಚಾರಿಕ ವಿಚಾರ ಪ್ರಜ್ಞೆ ಹರಿಜನರ ಸಮಗ್ರ ಇತಿಹಾಸದಲ್ಲಿ ಹೊಸ ಅಧ್ಯಾಯವೊಂದನ್ನು ತೆರೆದು, ನಾವೂ ಸಹ ಎಲ್ಲರ ಹಾಗೆ ಮನುಷ್ಯರು, ನಮಗೂ ಮಾನವೀಯತೆ, ಸ್ವಾತಂತ್ರ್ಯ ಮತ್ತು ಸಮಾನತೆ ಬೇಕು ಎಂಬ ಜ್ಞಾನ ಸ್ಪಷ್ಟವಾಗಬೇಕು. ಅಲ್ಲದೆ ನವಚೈತನ್ಯಕ್ಕೂ ಸಹ ಪುಟವಿಟ್ಟು, ವಿಚಾರಪರರನ್ನಾಗಿ ಪರಿವರ್ತಿಸಿ, ಸಾಮಾಜಿಕ ಅಸಮತೆಯನ್ನು ತೊಡೆದುಹಾಕಬೇಕು.

ಈ ದಿಸೆಯಲ್ಲಿ ಶಾಲಾಕಾಲೇಜುಗಳು, ವೃತ್ತಪತ್ರಿಕೆಗಳು ಮತ್ತು ವಿಚಾರವಾದಿಗಳು ಪ್ರಚಾರ ಸಾಧನಗಳಾಗಿ ಹರಿಜನರಲ್ಲಿ ಹುದುಗಿರುವ ಅಧೈರ್ಯ ಮತ್ತು ಅಜ್ಞಾನವನ್ನು ತೊಲಗಿಸಿ ವಿಚಾರ ಪ್ರಜ್ಞೆಯ "ವೀರ್ಯವೇತ್ತ" ಗಂಡಸರಾಗುವಂತೆ ಮಾಡುವುದು ಎಲ್ಲರ ಧ್ಯೇಯವಾಗಿರಬೇಕು. ಇಲ್ಲದಿದ್ದಲ್ಲಿ ಈ ಜನಾಂಗ ಸಾಮಾಜಿಕ ಪ್ರತಿಬಂಧನದಿಂದ ಯಾವತ್ತೂ ತಪ್ಪಿಸಿಕೊಳ್ಳುವಂತಿಲ್ಲ ಈ ದಿಕ್ಕಲ್ಲಿ 'ಪಂಚಮ' ಕೆಲಸ ಮಾಡುತ್ತದೆಂದು ನಂಬಿರುತ್ತೇನೆ.

—ವಿ. ನ. ನರಸಿಂಹಮೂರ್ತಿ
ತಲಕಾಡು

# ಅಣ್ಣಪ್ಪ ಇನ್ನೂ ಬದುಕಿದ್ದಾನೆ!

ದಕ್ಷಿಣ ಕನ್ನಡ ಜಿಲ್ಲೆಯ ಮೂಲೆಯಲ್ಲೊಂದು ಹಳ್ಳಿ 'ನೀರ್ಕಜೆ'. ಅಲ್ಲೊಂದು ಹಳೆ ಮುಳಿಮಾಡಿನ ಮನೆಯೊಳಗೆ ಕಾಡಿನಹಾಗೆ ಕತ್ತಲೆ. ಅಲ್ಲೊಬ್ಬಳು ಹೆಂಗಸು ಸ್ವಾನೆ ಮುದುಕಿ. ಅವಳ ಮಗ ಅಣ್ಣಪ್ಪನಾಯ್ಕ.

ಅಣ್ಣಪ್ಪನಾಯ್ಕನ ಅಪ್ಪನಿಗೆ ರೋಗ ಹಿಡಿದಾಗ ಔಷಧಿಗೆ ಸತ್ತಮೇಲೆ ಶವಸಂಸ್ಕಾರಕ್ಕೆ ಅಂತ ಅವ ಐನೂರು ರೂಪಾಯಿ ಸಾಲಮಾಡಿದ. ದುಡ್ಡಿನ ಅರ್ಜೆಂಟು ತಿಳಿದ ಸಾಹುಕಾರ ಒಂದು ಸಾವಿರಕ್ಕೆ ಪ್ರೋನೋಟು ಬರೆಸಿಕೊಂಡ. ಮೇಲೆ ಬಜಾರಿ ಬಡ್ಡಿ.

ಅಣ್ಣಪ್ಪ ಇರುವ ಚೂರುಪಾರು ಆಸ್ತಿ ನೋಡಿಕೊಳ್ಳುತ್ತಿದ್ದ. ಅಂತೂ ಮೂರು ವರ್ಷಗಳಲ್ಲಿ, ಅವನ ಅಮ್ಮನ ಜೆಂಡುಹೂರಿ 500 ರೂ.ಗಳ ಜೊತೆಗೆ ಬಡ್ಡಿ ಸೇರಿಸಿ ಸಾಹುಕಾರನಲ್ಲಿಗೆ ಹೋದ. ಆದರೆ ಆ ಸಾಲ ಅಲ್ಲಿಗೇ ಕೊಬ್ಬಿ 8 ಸಾವಿರ ಆಗಿತ್ತು !

ಗೇಣಿಗೆ ಇರುವ ಒಂದು ಚೂರು ಗದ್ದೆಯಲ್ಲಿ ಮಳೆಗಾಲದಲ್ಲಿ ಮಾತ್ರ ಉದ್ಯೋಗಿಯಾಗಿರುವ ಅಣ್ಣಪ್ಪನನ್ನೂ, ಅವನ ಜಡಕಲು ಎತ್ತುಗಳನ್ನೂ ಸೇರಿಸಿ ಮಾರಿದರೂ ಅಷ್ಟು ದುಡ್ಡು ಹುಟ್ಟುವುದಿಲ್ಲ. ಇನ್ನು ಈ ಸಾಲ, ಅದರ ಬಡ್ಡಿ, ದನಿಗೆ ಬಾಕಿ ಗೇಣಿ, ಭೂಮಿಗೆ ತೀರ್ವೆ, ತನ್ನ ಮತ್ತು ತಾಯಿಯ ಹೊಟ್ಟೆಗೆ ಊಟ, ಎತ್ತುಗಳಿಗೆ ಹಿಂಡಿ ಪ್ಲಸ್ ಭೂಮಿಯ ಕ್ರಯದ ಒಂದಂಶ ಹಣ ಇಷ್ಟು ಅವನ ಗದ್ದೆಯಲ್ಲಿ ಹುಟ್ಟುವುದಿಲ್ಲ. ಅದಕ್ಕಾಗಿ ಬೇಸಗೆಯಲ್ಲಿ ಕೂಲಿ ಕೆಲಸಕ್ಕೆ ತೊಡಗಿದ.

ಆದರೆ ಸಾಲ ನಿಲ್ಲಲಿಲ್ಲ. ಸಾಹುಕಾರ ಕೋರ್ಟಿಗೆ ಹೋದ. ಈಗ ಕೋರ್ಟು ಅಣ್ಣಪ್ಪ ಮೂರು ಸಾವಿರ ರೂ.ಗಳನ್ನು ಕೊಡಬೇಕೆಂತ ಹೇಳಿತು. ಇಲ್ಲವಾದರೆ, ಮನೆ, ಆಸ್ತಿ ಜಪ್ತಿ ಹೀಗೆಲ್ಲಾ ಇದೆ. ಈ ಮಧ್ಯೆ ಸಂಗ್ರಹಿಸಿದ್ದ 500 ರೂ. ಕೋರ್ಟಿಗೆ ಹೋಗಿಬರಲು ಬಸ್ಸಿಗೆ ಮುಗಿಯಿತು. ಇದು ನಡೆದು ನಾಲ್ಕು ತಿಂಗಳುಗಳಾದವು. ಇನ್ನೂ ಅಣ್ಣಪ್ಪ ಬದುಕಿಯೇ ಇದ್ದಾನೆ. ಪಕ್ಕದ ಮನೆಯವರ ತೋಟಕ್ಕೆ ಖಾಯಂ ಕೂಲಿಗೆ ಬರುತ್ತಾನೆ. ಈ ವರ್ಷ ಮದುವೆಯಾಗಲಿರುವ ಅವ, ಈಗಲೇ ಮುದುಕನ ಹಾಗೆ ಕಾಣುತ್ತಾನೆ, ಮಾತನಾಡುತ್ತಾನೆ.

—ಎಸ್. ಆರ್. ವಿಜಯಶಂಕರ
ಮೈಸೂರು

# ಪ್ರತಿಕ್ರಿಯೆ

## ಕಿಡಿಗೇಡಿ....ನನಸು

'ಶೋಷಿತ'ದ ಕಿಡಿಗೇಡಿಯು ದಲಿತರ ಉದರವನು ಹೊಕ್ಕು ಅವರ ಅಳಲನ್ನು ಅಳೆದು ಅವರ ಬೆನ್ನಟ್ಟಿದ ಕತ್ತಲೆಯನ್ನು ಕಿತ್ತು ಹೊಗೆಯಲು ಹಸಿಯಾದ ವಿಷಯವನ್ನು ವ್ಯಂಗ್ಯವಾಗಿ ಚಿತ್ರಿಸುತ್ತಾ ಬರುವುದು ಉತ್ತಮವಾಗಿದೆ.

ಕಿಡಿಗೇಡಿಯ ನೋಟ ಅತಿ ತೀಕ್ಷ್ಣವಾಗಿರುವುದರಿಂದ ಸಾಮಾನ್ಯ ಜನತೆಗೆ ತಕ್ಷಣದಲ್ಲಿ ಅರ್ಥವಾಗುವುದಿಲ್ಲ. ಏಕೆಂದರೆ, ಕೊನೆಯಲ್ಲಿ ಓದುಗರಿಗೆ ಪ್ರಶ್ನಾರ್ಥಕ ಚಿಹ್ನೆ ಬಿಟ್ಟು ತೆರಳುವುದು. ಮೊದಲ ಸಂಚಿಕೆಯಲ್ಲಿ ಹೋಟಲೊಂದಕ್ಕೆ ಕಣ್ಣಾಯಿಸಿದಾಗ, ಅಲ್ಲಿ ಕ್ಲೀನರಿಗೂ ಮತ್ತು ಗಿರಾಕಿಗೂ ನಡೆದ ಸಂಬಂಧವು ಜಾತಿ ಮತ್ತು ಹಿಂದೂಗಳ ದುಡಿಮೆಯ ಗೌರವ ಘನತೆಯನು ತುಂಬಾ ಸೂಕ್ಷ್ಮವಾಗಿ ಕಿಡಿಗೇಡಿಯು ಕಂಡಿದ್ದಾನೆ.

ಎರಡನೆ ಸಂಚಿಕೆಯಲ್ಲಿ ಮುಗ್ಧ ರೈತರ ಕೋರ್ಟಿನ ವಿವಾದವನ್ನು ಕಂಡು ಕಿಡಿಗೇಡಿ ನಾಚಿದ್ದಾನೆ. ರೈತರ ವಾಸ್ತವ ನ್ಯಾಯ ತೀರ್ಮಾನವನ್ನು ಉನ್ನತ ನ್ಯಾಯಾಧೀಶರನ್ನು ಮೀರಿಸಿದೆ- ಸರ್ಕಾರಿ ಕೋರ್ಟಿನ್ನು ಹತ್ತುವುದಕ್ಕಿಂತ ಊರ ಚಾಡಿಯ ನ್ಯಾಯವೇ ಮೇಲು ಮತ್ತು ನಿಜವಾದ ತಪ್ಪಿತಸ್ತನಿಗೆ ನಿಜವಾದ ಶಿಕ್ಷೆ ಸಿಗುತ್ತದೆ ಎನ್ನುವ ಭಾವನೆ ಇಲ್ಲಿಯ ಕಿಡಿ ನೋಟದಿಂದ ತಿಳಿದು ಬರುತ್ತದೆ ಮತ್ತು ಕೋರ್ಟಿನಿಂದ ಬಡವರ ಶೋಷಣೆಯ ಸತ್ಯವನ್ನು ಹೇಳಿದಂತಾಗುತ್ತದೆ. ಇದು ನಿಜವೆಂದು ಒಪ್ಪಲುಬಹುದು.

ಮೂರನೆ ಸಂಚಿಕೆಯಲ್ಲಿ ಕಿಡಿಗೇಡಿಯ ನೋಟ ವಾಸ್ತವದಿಂದ ಕೂಡಿದೆ. ಇಲ್ಲಿ ಹಾಸ್ಯದ ಜೊತೆಯಲ್ಲಿಯೇ ಜೀತಗಾರನ ಆಂತರಿಕ ನೋವನ್ನು ನೋಡಿ ತನ್ನ ಕಣ್ಣನ್ನು ಅತ್ತ, ಇತ್ತ ಒರಳಿಸಿ ಜೀತವಿಮುಕ್ತಿ, ನಾಳೆ? ಎಂದು ತಲೆ ಕೆರೆದಿದ್ದಾನೆ ಮತ್ತು ಕ್ರಾಂತಿಯ ಕಿರಣವನ್ನು ಜೀತಗಾರನ ಮೈಮೇಲೆ ಚೆಲ್ಲಿದ್ದಾನೆ. ಟ್ರಾಕ್ಟರ್ ಮಿಷನ್ ಶ್ರೀಮಂತರ ಹೊಲವನ್ನು ಹಸನುಮಾಡಿ ಫಸಲು ಕೊಟ್ಟರೆ; ನಾವು ಅದೇ ಟ್ರಾಕ್ಟರನ್ನು ನಮ ನಮ್ಮ ಶಾಶ್ವತ ಕಾಲದಿಂದಲೂ ಪಾಚಿಕಟ್ಟಿರುವ ಮಿದುಳನ್ನು ಉಳುಮೆಮಾಡಿ, ಕ್ರಾಂತಿ ಫಸಲನ್ನು ಬೆಳೆಯುವಂತೆ ಏಕೆ ಮಾಡಬಾರದು? ಹೀಗೆ ಕಿಡಿಗೇಡಿಯ ನೋಟದ ಒಳ ಅರ್ಥವನ್ನು ಕೆದಕಿನೋಡಿದರೆ ಕೆಲವರು ನೋಟದಿಂದ ದೂರಾಗಲು ಪ್ರಯತ್ನಿಸಬಹುದು. ಕಾರಣ ಆ ನೋಟ ತುಂಬಾ ಸೂಕ್ಷ್ಮವಾಗಿದೆ

ಕೊನೆಯಲ್ಲಿ ಕಿಡಿಗೇಡಿಯ ಕನಸಿನಲ್ಲಿ ಕ್ರಾಂತಿಯ ಭವಿಷ್ಯದ ರುದ್ರಭೂಮಿಯನ್ನು ನೋಡಿ ನನಸಾಗುವಂತೆ ಮಾಡಲು ಇಚ್ಛಿಪಟ್ಟಿರುವುದು ತುಂಬಾ ಮೆಚ್ಚುಗೆಯ ಕನಸಾಗಿದೆ. ಕಪ್ಪು ಜನರ ಅಂಧತೆಯನ್ನು ಸ್ವಲ್ಪ ಹರಿಸಲು ಕಣ್ಣು ತೆರೆದಿರುವ ಮತ್ತು ಜೊತೆಯಲ್ಲಿಯೇ ಕ್ರಾಂತಿಯ ಕಹಳೆ ಊದುತ್ತಿರುವ ಈ ಕಿಡಿಗೇಡಿಗೆ ನನ್ನ ನಮನ.

—ನಂಜನಹಳ್ಳಿ ನಾರಾಯಣ

# ದಾಖಲೆಗಳು

1975ನೇ ಜನವರಿಯಿಂದ ಕನ್ನಡ ದಿನ ಪತ್ರಿಕೆಗಳಲ್ಲಿ ಸಂಗ್ರಹಿಸಿದ ದಲಿತರ ಮೇಲೆ ನಡೆದ ದೌರ್ಜನ್ಯದ ಸುದ್ದಿಗಳು:-

29-3-75—ಶಿಡ್ಲಘಟ್ಟ ತಾಲ್ಲೂಕಿನ ಕ್ಯಾಸಗೆರೆ ಗ್ರಾಮದಲ್ಲಿ ಜನವರಿ 24 ರಂದು ನರಸಿಂಹಯ್ಯ ಎಂಬ ಹತ್ತು ವರ್ಷದ ಬಾಲಕನ ಮೇಲೆ ಕಳ್ಳತನದ ಆರೋಪ ಹೊರಿಸಿ ನಾರಾಯಣ ಎಂಬುವವನು ಆತನ ಕತ್ತು ಕತ್ತರಿಸಿ ಕೊಲೆ ಮಾಡಿದ.

31-3-75—ಉಜ್ಜಯಿನಿ ಜಿಲ್ಲೆ ಕಾಚಾರೂಡ ಎಂಬ ಊರಿನಲ್ಲಿ ಸಬ್‌ಇನ್ಸ್‌ಪೆಕ್ಟರ್ ಒಬ್ಬರ ಮುಂದಾಳತ್ವದಲ್ಲಿ ಪೊಲೀಸ್ ತಂಡವೊಂದು ಹರಿಜನ ಕಾರ್ಯಕರ್ತರಾದ ಶ್ರೀ ಕಾಲುರಾಂ ಅವರ ಮನೆಗೆ ತೆರಳಿ, ತನ್ನೊಡನೆ ಜಗಳವಾಡಿದ್ದ ಅವರ ಇಬ್ಬರು ಪುತ್ರರಿಗಾಗಿ ಹುಡುಕಿದರು. ಅವರನ್ನು ಪತ್ತೆ ಮಾಡಲು ಅಸಾಧ್ಯವಾದಾಗ ಕುಪಿತರಾದ ಪೊಲೀಸರು ಕಾಲುರಾಂ ಅವರ ಪತ್ನಿ, ಮಗಳು ಹಾಗೂ ಇನ್ನೊಬ್ಬ ಮಗನನ್ನು ಹೊರಗೆಳೆದು ಲಾಠಿಯಿಂದ ಕ್ರೂರವಾಗಿ ಥಳಿಸಿದರು.

1-4-75—ಹುಬ್ಬಳ್ಳಿಯ ಬೊಮ್ಮಾಪುರದಲ್ಲಿ ಫೆ. 28 ಮತ್ತು ಮಾರ್ಚಿ 1 ರಂದು ಅಲ್ಲಿನ ಸವರ್ಣೀಯರಿಂದ ಹರಿಜನರ 8 ಗುಡಿಸಲುಗಳು ನೆಲಸಮ. ಜಾಗದ ಮಾಲೀಕನೆಂದು ಅಲ್ಲಿಯ ಪಾಟೀಲನ ಪ್ರಭಾವದಿಂದ ನೆಲಸಮ ಮಾಡಿದ ಜಾಗಕ್ಕೆ ಮರದ ದಿಮ್ಮಿ ಜೋಡಿಸಲಾಗಿತ್ತು.

14-1-75. ಬಸ್ತಿ—ಮುಂದರ್ವ ಪೊಲೀಸ್‌ಸರ್ಕಲ್‌ಗೆ ಸೇರಿದ ಭಾರಿ ಗ್ರಾಮದಲ್ಲಿ ಹರಿಜನರಿಗೂ ಮತ್ತು ಸವರ್ಣೀಯರಿಗೂ ಸಂಭವಿಸಿದ ಗುಂಪು ಘರ್ಷಣೆಯಲ್ಲಿ ಆರು ಜನ ಹರಿಜನರು ಗಾಯಗೊಂಡರಲ್ಲದೆ 30 ಗುಡಿಸಲುಗಳು ಬೆಂಕಿಗೆ ಆಹುತಿಯಾದವು.

26-4-75. ರಾಮನಗರ—ಬಿಡದಿ ಹೋಬಳಿ ಉರುಬರನಕರೇನ ಹಳ್ಳಿಯಲ್ಲಿ ವೆಂಕಟರಮಣಪ್ಪ ಎಂಬ ಹರಿಜನ ವ್ಯಾಪಾರಕ್ಕೆ ಬಂದಿದ್ದ. ಎಂಟು ಜನ ಸವರ್ಣೀಯರು ಆತನನ್ನು ತೆಂಗಿನ ಮರಕ್ಕೆ ಕಟ್ಟಿ ಹೊಡೆದು, ಕೈಗಡಿಯಾರವನ್ನು ಕಿತ್ತು ಕಳುಹಿಸಿದರು.

3-5-75. ಬಲ್ಲಿಯಾ—ಗಾಜಿಪುರ ಜಿಲ್ಲೆಯ ಷೇರ್‌ಪುರದಲ್ಲಿ ಹರಿಜನರು ಮತ್ತು ಭೂಮಿಹಾರರ ನಡುವೆ ನಡೆದ ಘರ್ಷಣೆಯಲ್ಲಿ ಭೂಮಿಹಾರರು ಹರಿಜನರ ಬಸ್ತಿಗೆ ಬೆಂಕಿ ಹಾಕಿ, ಹರಿಜನರನ್ನು ಸಜೀವವಾಗಿ ಅಗ್ನಿಯೊಳಕ್ಕೆ ಎಸೆದರು. ಭಸ್ಮವಾದ ಬಸ್ತಿಯಲ್ಲಿ 30 ಜನರು ಸತ್ತಿದ್ದು, 27 ದೇಹಗಳನ್ನು ಹೊರತೆಗೆಯಲಾಯಿತಲ್ಲದೆ ಇನ್ನೂ ಹೆಚ್ಚು ಸಾವು ಸಂಭವಿಸಿದೆ ಎಂದು ಅಲ್ಲಿನ ಮಾಜಿ ಶಾಸಕರೊಬ್ಬರು ತಿಳಿಸಿದ್ದಾರೆ. ಸ್ಥಳೀಯ ಕಾಲೇಜು ಅಧ್ಯಾಪಕರು 100 ಮಂದಿ ಹರಿಜನರ ಸಜೀವ ದಹನವಾಗಿದೆಯೆಂದು ತಿಳಿಸಿದ್ದಾರೆ.

-5-75.—ಕೋಲಾರ ತಾಲ್ಲೂಕಿನ ಹೊಗೆರಿ ಗ್ರಾಮದಲ್ಲಿ ಹರಿಜನ ಬಾಲಕಿಯೊಬ್ಬಳು ದನಕಾಯುತ್ತಿದ್ದಾಗ ಆಕೆಯ ಮಾನಭಂಗ ಮಾಡಲೆತ್ನಿಸಿದ್ದ ಸವರ್ಣೀಯನೊಬ್ಬನಿಗೆ ಹುಡುಗಿಯು ಕಪಾಳಮೋಕ್ಷ ಮಾಡಿದಾಗ ಹುಡುಗನು ತಮ್ಮ ಜನಕ್ಕೆ ತಿಳಿಸಿ ಹರಿಜನ ಈರಯ್ಯ ಎಂಬುವವನ ಮೇಲೆ ದೌರ್ಜನ್ಯ ನಡೆಸಿದರು.

(ಮುಂದುವರಿಯುವುದು)

# ಅಂತರ್ರಾಷ್ಟ್ರೀಯ ಮಹಿಳಾ ವರ್ಷ ಯಾರಿಗೆ ?

ಕಳೆದ ವರ್ಷ ಭಾರತದಾದ್ಯಂತ 'ಅಂತರ ರಾಷ್ಟ್ರೀಯ ಮಹಿಳಾವರ್ಷ'ವನ್ನು ಆಚರಿಸಲಾಯಿತು. ಎಲ್ಲಿಲ್ಲಿ ನೋಡಿದರೂ ಸಭೆ ಸಮಾರಂಭಗಳು, ಸಮಾಜದಲ್ಲಿ ಪ್ರತಿಷ್ಠಿತರಾದ ಮಹಿಳೆಯರ ಭಾಷಣಗಳು ನಡೆದುವು. ಪತ್ರಿಕೆಗಳಲ್ಲಿ, ಪ್ರಸಾರ ಮಾಧ್ಯಮಗಳಲ್ಲಿ ಸಾಕಷ್ಟು ಪ್ರಚಾರವೂ ಆಯಿತು. ಇಷ್ಟೆಲ್ಲ ಆದದ್ದು ಏತಕ್ಕೆ ಮತ್ತು ಯಾರಿಗೆ? ಬಹಳ ಜನ ಈ ಪ್ರಶ್ನೆ ಹಾಕಿಕೊಂಡಿರಲಾರರು. ಹಾಕಿಕೊಂಡಿದ್ದರೆ ಬಹುಶಃ 'ಮಹಿಳಾವರ್ಷ' ಕೆಲವೇ ಸಮಯಸಾಧಕರ ಪಾಲಾಗುತ್ತಿರಲಿಲ್ಲ.

ಮಹಿಳೆಯರಿಗೆ ಸ್ವಾತಂತ್ರ್ಯ, ಸಮಾನತೆ ಬೇಕು. ಅವರು ಪುರುಷ ದಾಸ್ಯದಿಂದ ಬಿಡುಗಡೆಯಾಗಬೇಕು. ಭಾರತೀಯ ಸಮಾಜ ಅವರ ಮೇಲೆ ಮಾಡುತ್ತಿರುವ ಶೋಷಣೆಯಿಂದ ಮುಕ್ತರಾಗಬೇಕು. ಎಲ್ಲಾ ರಂಗಗಳಲ್ಲೂ ಮಹಿಳೆಯರು ಮುಂದೆ ಬರಬೇಕು. ಇತ್ಯಾದಿ ಬಡಕೊಳ್ಳುತ್ತ 'ಮಹಿಳಾವರ್ಷ' ಹಾಗೇ ಕರಗಿಹೋಯಿತು.

ಹೆಣ್ಣು ಅಂದಾಕ್ಷಣ ದಾಸ್ಯ ಅನ್ನುವುದನ್ನೇ ಪ್ರತಿಧ್ವನಿಸುವ ಈ ಭಾರತೀಯ ಸಮಾಜದಲ್ಲಿ ಮೂಲಭೂತ ಬದಲಾವಣೆಯಾಗದೆ ಏನೂ ಸಾಧಿತವಾಗದು. ಜನರಲ್ಲಿ ಹುದುಗಿರುವ ಈ ಭಾವನೆ ಹಾಳಾಗಬೇಕು. ಇದಕ್ಕಾಗಿ ಮಹಿಳೆಯರು ಪುರುಷರಂತೆ ಆರ್ಥಿಕ ಸಮಾನತೆಯನ್ನು ಪಡೆಯಬೇಕು ಎಂಬ ಕೆಲವರ ಹೇಳಿಕೆಯಲ್ಲಿ ಸತ್ಯವಿದೆ. ಆದರೆ ಇದರೊಂದಿಗೆ ಸ್ನೇಹ ಸೌಹಾರ್ದಗಳೂ ಮುಖ್ಯ. ಇಲ್ಲದಿದ್ದರೆ ಗಂಡು ಹೆಣ್ಣಿನ ಸಮಾನತೆ ಸಂಬಂಧ ಇವುಗಳು ಕೇವಲ ವ್ಯವಹಾರಗಳಾಗುತ್ತವೆ.

'ಮಹಿಳಾವರ್ಷ' ಮಾಡಿದ್ದು ಈ ದೇಶದ ಎಷ್ಟು ಮಹಿಳೆಯರಿಗೆ ಗೊತ್ತು? ಶೇ ೮೦ ಜನರು ಹಳ್ಳಿಗಳಲ್ಲಿ ವಾಸಮಾಡುತ್ತಿರುವ ಭಾರತದಲ್ಲಿ ಮಹಿಳಾವರ್ಷ ಮಾಡಿದವರು ಯಾರು? ಅಷ್ಟೇ ಅಲ್ಲದೆ ಪಟ್ಟಣಗಳಲ್ಲೇ ವಾಸಿಸುವ ಎಷ್ಟು ಮಹಿಳೆಯರು ಮಹಿಳಾವರ್ಷದ ಬಗ್ಗೆ ತಿಳಿದಿದ್ದಾರೆ? ಇವೆಲ್ಲ ಪ್ರಶ್ನೆಗಳೇ. ಬರೀ ಮೂರು ಮತ್ತೊಂದು ಜನ ತಮ್ಮ ಬೇಳೆಬೇಯಿಸಿಕೊಂಡದ್ದೇ ಮಹಿಳಾವರ್ಷ ಸಾಧಿಸಿದ್ದು.

ಜೀರ್ಣವಾದ ಸಂಪ್ರದಾಯಗಳಿಂದ ನರಳುತ್ತಿರುವ ಸಮಾಜದಲ್ಲಿ, ಅಜ್ಞಾನದ ಗವಿಯಲ್ಲಿ ತೊಳಲುತ್ತಿರುವ ಈ ರಾಷ್ಟ್ರದಲ್ಲಿ ಸಭೆ ಸಮಾರಂಭಗಳು ನಡೆಸಿ ಒಂದೊಂದು ರಂಗದಲ್ಲಿ 'ಒಬ್ಬೊಬ್ಬರನ್ನು' ತೋರಿಸಿ ಇದೇ ಮಹಿಳಾ ವರ್ಷವೆಂದರೆ ಅದರಂತ ದುರಂತ ಮತ್ತೊಂದಿಲ್ಲ.

ಎರಡು ಹೊತ್ತಿನ ಊಟಕ್ಕಾಗಿ ಇಡೀ ದಿನ ದುಡಿಯುತ್ತಾ ನಿಜವಾದ ಶೋಷಣೆಗೊಳಗಾಗಿರುವ ಹೆಣ್ಣಿನ ವಿಷಯವಾಗಿ ಸುಧಾರಣ ಮಹಿಳೆಯರು ಆಲೋಚನೆ ಮಾಡಬೇಕಾಗಿದೆ. ಹೊಟ್ಟೆ ತುಂಬುವುದೊಂದೇ ಆಲೋಚನೆಯಾಗಿರುವ ಇವರಿಗೆ ಸ್ತ್ರೀ ಪುರುಷರ ಭೇದವಿಲ್ಲ. ಸಂಸಾರದ ಬಂಡಿಗೆ ಹೆಣ್ಣುಗಂಡುಗಳು ಎರಡು ಎತ್ತುಗಳು ಎನ್ನುವುದು ಇವರ ವಿಷಯದಲ್ಲಿ ನಿಜವಾಗುತ್ತದೆ. ಇಲ್ಲಿ ಸಮಾನತೆ ಸ್ವಾತಂತ್ರ್ಯಗಳನ್ನು ಯಾರಿಗೆ ಯಾರು ಕೊಡಬೇಕು? . . . . . ಸಮಾಜದ ಸರ್ವ ವ್ಯವಹಾರಗಳಿಂದ ವಂಚಿಸಲ್ಪಟ್ಟ ನಿಸ್ಸಹಾಯಕರಾಗಿ ಕಣ್ಣೀರಿನಲ್ಲಿ ಕೈತೊಳೆಯುತ್ತಿರುವ ಅಭಾಗಿನಿಯರನ್ನು ಈ ದುಃಖದಿಂದ ಬಿಡುಗಡೆ ಮಾಡಬೇಕಾಗಿದೆ. ಎಲ್ಲರಂತೆ ಬಾಳುವ ಸಮಾನತೆ ಕಲ್ಪಿಸಬೇಕಾಗುತ್ತದೆ. ಸ್ವೇಚ್ಛೆಯಿಂದ ಬದುಕುವ ಸ್ವಾತಂತ್ರ್ಯ ನೀಡಬೇಕಾಗಿದೆ. ಜಾತಿ, ಧರ್ಮ, ಸಂಪ್ರದಾಯಗಳ ವಿಷ ಸುಳಿಗೆ ಸಿಕ್ಕಿ ನಲುಗಿ ಹೋಗುತ್ತಿರುವ ದಲಿತ ಮಹಿಳೆಯರ ಉದ್ಧಾರ ಮೊದಲಾಗಬೇಕು. ಅದಕ್ಕೆ ಮಹಿಳಾವರ್ಷಗಳು ನಾಂದಿಯಾಗಬೇಕು.

—ಎ. ಶೈಲಜ

# ಹರಿಜನರಿಗೆ ಅನ್ಯಾಯ

(೬ನೇ ಪುಟದಿಂದ)

ಕಂಪನಿಯ ವರದಿ ಪ್ರಕಾರ, ಕೆಲಸಗಾರರ ಒಟ್ಟು ೧೭೩೫ ಸಂಖ್ಯೆಯಲ್ಲಿ 266 ಹರಿಗಿರಿಜನರಿದ್ದಾರೆ. ಅಂದರೆ ಶೇ. ೧೫ ಸರಾಸರಿ ಇದ್ದಾರೆಂದು ಮತ್ತು ೧೯೭೫ರ ಏಪ್ರಿಲ್ ತಿಂಗಳಲ್ಲಿ ಸಿವಿಲ್ ಎಂಜಿನಿಯರಿಂಗ್ ವಿಭಾಗದಲ್ಲಿ ಆಯ್ಕೆಯಾದ ೧೯ ಜನರಲ್ಲಿ ೪ ಜನ ಹರಿಗಿರಿಜನರನ್ನು ಆಯ್ಕೆ ಮಾಡಲಾಗಿದೆ ಎಂದೂ ೧೯ಕ್ಕೆ ೪ ಜನರೆಂದರೆ ಅದು ಸರಾಸರಿ ಶೇ. ೨೦ ಆಯಿತೆಂದೂ ತಿಳಿಸಿದ್ದಾರೆ ಸಿವಿಲ್ ಎಂಜಿನಿಯರಿಂಗ್ ವಿಭಾಗಕ್ಕೆ ಆಯ್ಕೆಯಾದ ಹರಿಜನರಾರೋ ಕಂಪನಿಯವರಿಗೇ ಗೊತ್ತು. ಕಳೆದ ಎರಡು ವರ್ಷಗಳಿಂದ ಸತತ ಪ್ರಯತ್ನ ಮಾಡುತ್ತಿರುವ ಹರಿಜನ ಬಿ. ಇ. ಪದವೀಧರರೊಬ್ಬರಿಗೆ ಇನ್ನೂ ಕೆಲಸಕೊಡಲಾಗಿಲ್ಲ. ಎಂದ ಮೇಲೆ ಈ ೪ ಜನ ಜೀವಂತ ಮನುಷ್ಯರೊ ಅಥವಾ ಕಲ್ಪನೆಯ ಪುರುಷರೊ? ಬಹುಶಃ ಅವರು ಸರ್ಕಾರಕ್ಕೆ ಅಂಕಿಅಂಶಗಳನ್ನು ತುಂಬಲು ಅಧಿಕಾರಿಗಳ ತಲೆಯಲ್ಲಿ ಧಿಢೀರನೆ ಹುಟ್ಟಿದ ಮಾಯಾ ಮಚ್ಛೇಂದ್ರರಿರಬೇಕು! ಇಂಥ ಮಾಯಾ ಮಚ್ಛೇಂದ್ರರು ಕುವಿಷಯಗಳು ಬಂದಾಗೊಮ್ಮೆ ಜನ್ಮತಾಳಿ ಮಂತ್ರದಂಡದಿಂದ ದಫ್ತರ್‌ಗಳನ್ನು ಪ್ರವೇಶಿಸಿ ಏನೂ ತಿಳಿಯದ ಹರಿಜನರ ಬಾಯಲ್ಲಿ ಮಣ್ಣು ಹಾಕುತ್ತಾ ಬಂದಿದ್ದಾರೆ.

ಇನ್ನಾದರೂ ಅಧಿಕಾರಿ ವರ್ಗದವರು ಇಂಥ ಮಾಯಾ ಮಚ್ಛೇಂದ್ರರ ಸೃಷ್ಟಿ ನಿಲ್ಲಿಸುವುದು ಆರೋಗ್ಯಕರ. ಕೇಂದ್ರ ಸರ್ಕಾರವು ಈಗಲೀಗ ಕಂಪೆನಿ ವಿಸ್ತರಣೆಗೆ ೭.೩ ಕೋಟಿ ರೂ.ಗಳನ್ನು ಮಂಜೂರು ಮಾಡಿದ್ದು, ಅದರಲ್ಲಾದರೂ ತ್ಯಕ್ತ ಜನರಿಗೆ ೧೦ ವರ್ಷಗಳಲ್ಲಿ ಆಗಿರುವ ಅನ್ಯಾಯವನ್ನು ಸರಿಪಡಿಸಬೇಕು.

# ನಗರ ಸಭಾ ಕಾರ್ಯಾಲಯ, ಮಂಡ್ಯ

ನಂ. ಎ 3 (ಎಸ್) ಪಿ.ಆರ್. 151 : 75-76 ತಾರೀಖು : 16-2-76

## ಪ್ರಕಟಣೆ

## ಸೈಟುಗಳ ಹರಾಜ್ ಇಸ್ತಿಹಾರ್

ಈ ಮೂಲಕ ಸಮಸ್ತ ಜನಗಳಿಗೂ ತಿಳಿಯಪಡಿಸುವುದೇನೆಂದರೆ, ಮಂಡ್ಯ ನಗರದಲ್ಲಿರುವ, ಮಂಡ್ಯ-ಮಳವಳ್ಳಿ, ಗುತ್ತಲು ಮೆಯಿನ್ ರಸ್ತೆಯಲ್ಲಿರುವ (ಜಯಲಕ್ಷ್ಮಿ ಚಿತ್ರಮಂದಿರದ ಪೂರ್ವ ಭಾಗದಲ್ಲಿ) ಹೊಸದಾಗಿ ವಿಂಗಡಿಸಿರುವ ೧೦ (ಹತ್ತು) ಸೈಟುಗಳನ್ನು ಬಹಿರಂಗ ಹರಾಜು ಮೂಲಕ ವಿಲೇ ಮಾಡಲು ತಾರೀಖು ೧೧-೩-೧೯೭೬ ನೇ ಗುರುವಾರ ಮಧ್ಯಾಹ್ನ ೧—೦೦ ಘಂಟೆಯಿಂದ ಸದರಿ ಸೈಟುಗಳ ಬಳಿಯಲ್ಲಿ, ಮಂಡ್ಯ ನಗರಸಭಾ ಅಧ್ಯಕ್ಷರು ಅಥವಾ ಕಮಿಷನರ್ ರವರಿಂದಾಗಲಿ ಅಥವಾ ಅವರಿಂದ ಅಧಿಕಾರ ಪಡೆದ ಇತರೇ ಮುನಿಸಿಪಲ್ ಅಧಿಕಾರಿಗಳಿಂದಾಗಲಿ ಸೈಟುಗಳ ಬಳಿಯಲ್ಲೇ ಬಹಿರಂಗ ಹರಾಜು ಮೂಲಕ ವಿಲೇ ಮಾಡಲಾಗುತ್ತೆ.

ಈ ಹರಾಜಿನಲ್ಲಿ ಭಾಗವಹಿಸಲಿಷ್ಟವುಳ್ಳವರು ೧,೦೦೦-೦೦ (ಒಂದು ಸಾವಿರ) ರೂಪಾಯಿಗಳನ್ನು ನಗದು ಠೇವಣಿಯಾಗಿ ನಗರಸಭೆಗೆ ಜಮಾ ಮಾಡಿ ಹರಾಜಿನಲ್ಲಿ ಭಾಗವಹಿಸತಕ್ಕದ್ದು.

ಈ ಹರಾಜಿನ ಷರತ್ತು ಮತ್ತು ಸೈಟುಗಳ ವಿವರಣೆಯನ್ನು ನಗರಸಭೆಯ ಆಫೀಸಿನಲ್ಲಿ ತಿಳಿಯಬಹುದಾಗಿರುತ್ತೆ. ತಿಳಿಯುವುದು.

## ಸೈಟುಗಳ ಷೆಡ್ಯೂಲ್

| ಸೈಟು ನಂಬರ್ | ವಿಸ್ತೀರ್ಣ (ಅಡಿಗಳಲ್ಲಿ) |
|---|---|
| 6 | $26 \times \frac{48 + 52}{2}$ |
| 7 | $26 \times \frac{52 + 56}{2}$ |
| 8 | $26 \times \frac{56 + 60}{2}$ |
| 9 | $26 \times \frac{30 + 34}{2}$ |
| 10 | $\frac{27 + 30}{2} \times \frac{34 + 38}{2}$ |
| 1 | $26 \times \frac{26 + 30}{2}$ |
| 2 | $26 \times \frac{30 + 34}{2}$ |
| 3 | $\frac{26 + 27}{2} \times \frac{34 + 40}{2}$ |
| 4 | $\frac{26 + 27}{2} \times \frac{40 + 44}{2}$ |
| 5 | $26 \times \frac{44 + 48}{2}$ |

(ಸಹಿ) ಎಸ್. ಹೊನ್ನಯ್ಯ
ಅಧ್ಯಕ್ಷ, ನಗರಸಭೆ, ಮಂಡ್ಯ.

(ಸಹಿ) ಪಿ. ಕೃಷ್ಣನ್
ಕಮಿಷನರ್ ನಗರಸಭೆ, ಮಂಡ್ಯ.




## ಕಣ್ಣೋಟ

ಯಾವ ಹೆಂಡದಿಂದ ಮತ್ತು ಬರಿಸಿಕೊಂಡು ತಮ್ಮನ್ನೂ ತಮ್ಮ ಕಷ್ಟಕೋಟಲೆಗಳನ್ನೂ ಮರೆತರೋ ಆ ಕಡೆಗಣಿಸಲ್ಪಟ್ಟ ಜನ ಸಮುದಾಯದಿಂದ ಬಂದವರಿಂದಲೇ ಹೆಂಡದ ಬಗ್ಗೆ ಮೂರು ಮಾತುಗಳಿವೆ. ಆ ಮೂರು ಮಾತುಗಳನ್ನು ನಾಕಾ ದಿಕ್ಕಿನಿಂದಲೂ ನೋಡಿ, ಹೆಂಡದ ಬಗ್ಗೆ ಒಂದು ನಿಲುವನ್ನು ನಾವು ತಾಳಬೇಕಾಗಿದೆ. ಅದಾವುದೆಂದು ವಿಚಾರಿಸೋಣ. ಈ ಹೇಳಿಕೆಗಳನ್ನು ನೋಡಿರಿ—

1. ಮದ್ಯಪಾನ ರದ್ದಾಗಲಿ.

—ಶ್ರೀ ಟಿ. ಎನ್. ನರಸಿಂಹಮೂರ್ತಿ

3. ಹೆಂಡದ ಬದಲು ಬೀರು ಕುಡಿಯಿರಿ.

—ಶ್ರೀ ಎನ್. ರಾಚಯ್ಯ

2. ಹೆಂಡ ಕುಡಿಯಿರಿ.

—ಶ್ರೀ ಸಿದ್ಧಲಿಂಗಯ್ಯ

ಮದ್ಯಪಾನ ರದ್ದೂ ಕೂಡ ಆಗಿ ಸೋತಿದೆ. ಮದ್ಯಪಾನ, ಲಾಟರಿ, ಕುದುರೆ ಜೂಜು ಇತ್ಯಾದಿಗಳಿಂದ ಬರುವ ಕೋಟಿಗಟ್ಟಲೆ ಲಾಭಾಂಶ ಯಾವ ಸರ್ಕಾರವನ್ನೇ ಮೋಹಿಸಿ ಬಲಿ ತೆಗೆದುಕೊಳ್ಳುವಂಥ ಶಕ್ತಿ ಉಳ್ಳದ್ದು. ಆದ್ದರಿಂದ ಮದ್ಯಪಾನ ರದ್ದಾಗಬೇಕಾದರೆ ಅದರಲ್ಲಿ ವ್ಯವಹಾರಿಕತೆಗಿಂತ ಭಾವನಾತ್ಮಕವಾದ ಪ್ರಬಲ ಮನಸ್ಸಿರಬೇಕಾಗುತ್ತದೆ. ಅಂದರೆ, ಮದ್ಯಪಾನ ರದ್ದು ಮಾಡುವ ಸರ್ಕಾರಕ್ಕೆ ತನ್ನ ಸಂಬಂಧಿಗಳು ಈ ಮದ್ಯಪಾನದಿಂದ ಹಾಳಾಗುತ್ತಿದ್ದಾರೆ ಎಂದು ಗಟ್ಟಿಯಾಗಿ ಅನ್ನಿಸಬೇಕಾಗುತ್ತದೆ. ಈ ರೀತಿ ಅನಿಸಬೇಕಾದರೆ ಕುಡಿತದ ಜಗತ್ತಿನಿಂದ ಬಂದವರ ಕೈಲಿ ಸರ್ಕಾರ ಇದ್ದೂ ಅವರ ಕೈಲಿ ಅಧಿಕಾರವೂ ಇರಬೇಕಾಗುತ್ತದೆ ಅಥವಾ ಮದ್ಯಪಾನ ರದ್ದು ಮಾಡುವವರು ನಿಜವಾದ ಗಾಂಧಿ ತಾತ್ವಿಕತೆ ಉಳ್ಳಂಥ ಗಟ್ಟಿ ಜನರಾಗಬೇಕಾಗುತ್ತದೆ. ಇಲ್ಲದಿದ್ದರೆ ಮದ್ಯಪಾನ ರದ್ದಿನಿಂದ ಆಗುವ ಕೋಟಿಗಟ್ಟಲೆ ಹಣದ ನಷ್ಟವನ್ನು ಬೇರೆಯವರು ಅಥವಾ ಬೇರೆಯವರ ಸರ್ಕಾರ ತಂದುಕೊಳ್ಳಲು ಸಹಜವಾಗಿ ಬಯಸುವುದಿಲ್ಲ..? ಬೇರೆಯವರು ಮದ್ಯಪಾನವನ್ನು ವ್ಯವಹಾರಿಕವಾಗಿ ನೋಡುವರು. ಆದ್ದರಿಂದ ಸದ್ಯದ ಪರಿಸ್ಥಿತಿಯಲ್ಲಿ ಮದ್ಯಪಾನ ರದ್ದು ಒಂದು ಆಗದ ಆದರ್ಶ ಅಷ್ಟೆ.

ಮುಂದಿನ 'ಹೆಂಡದ ಬದಲು ಬೀರು ಕುಡಿಯಿರಿ' ಎಂಬ ಮಾತು ತುಂಬಾ ಕುತೂಹಲದ್ದಾಗಿದೆ. ಮದ್ಯಪಾನ ಸಧ್ಯಕ್ಕೆ ರದ್ದಾಗದು ಎಂಬ ಅರಿವು ಈ ಮಾತಿನಲ್ಲಿದೆ. ಹೆಂಡವನ್ನು ಕುಡಿಯುವ ಜನಕೆಗೆ ಮಾತ್ರವೆ ಈ ಮಾತನ್ನು ಹೇಳಲಾಗಿದೆ. ತಮಾಷೆ ಎಂದರೆ ಹೆಂಡವನ್ನು ಕುಡಿಯುವ ಜನ ಬೀರನ್ನು ಕುಡಿಯಲು ಆರ್ಥಿಕವಾಗಿ ಅಸಮರ್ಥರಾಗಿದ್ದಾರೆ. ಆದ್ದರಿಂದ ಈ 'ಹೆಂಡದ ಬದಲು ಬೀರು ಕುಡಿಯಿರಿ' ಮಾತಿನಂತೆ ದಲಿತ ಜನತೆ ನಡೆದುಕೊಳ್ಳುವುದಾದರೆ ಇವರಿಗೆ ಕನಸಿನಲ್ಲಿ ಮಾತ್ರ ಬೀರು ಕುಡಿಯಲು ಸಾಧ್ಯವಾಗುತ್ತದೆ. ಯಾಕೆಂದರೆ ವಾಸ್ತವದಲ್ಲಿ ಬೀರು ಕುಡಿಯಲು ಕಾಸಿರುವುದಿಲ್ಲ. ಕಾಸಿರುವ ದಲಿತರು ಬೀರು ಕುಡಿದರೆ ಅದು ಸುಲಿಗೆಯಿಂದ ತಪ್ಪಿಸಿಕೊಂಡದ್ದಾಗಿರುತ್ತದೆ. ಅಂದರೆ ಈ ಮಾತಿನಲ್ಲಿ 'ಹೆಂಡವನ್ನು ಕುಡಿದು ಹಾಳಾದ ಜನಾಂಗದ ಮಟ್ಟಿಗಾದರೂ ಮದ್ಯಪಾನ ರದ್ದಾಗಲಿ' ಎಂಬ ಅಸಹಾಯಕ ಒಳದನಿ ಇದೆ. 'ಹೆಂಡವನ್ನು ಕುಡಿಯಿರಿ', 'ದನದ ಬಾಡನ್ನು ತಿನ್ನಿ', ಇದು ಅಂತರ ರಾಷ್ಟ್ರೀಯ ಆಹಾರ'—ಇತ್ಯಾದಿಯಾಗಿ ಶ್ರೀ ಸಿದ್ಧಲಿಂಗಯ್ಯ ಹೇಳುವರು. ಇದಕ್ಕಾಗಿ ಕೀಳಾಗಿ ಭಾವಿಸಿಕೊಳ್ಳಬೇಕಾಗಿಲ್ಲ ಎಂದು ಇವರವಾದ ಹೆಂಡ, ದನದ ಬಾಡನ್ನು ಕೇವಲ ಆಹಾರವೆಂಬಂತೆ ಭಾವಿಸಿ ಇವರು ಈ ಮಾತನ್ನು ಹೇಳುವರು. ದುರಂತವೆಂದರೆ ಹೆಂಡ, ದನದ ಬಾಡು ನಮ್ಮ ನಮ್ಮ ಪಾಲಿಗೆ ಕೇವಲ ಆಹಾರ ಮಾತ್ರವಾಗಿಲ್ಲ ಕ್ರೂರವಾದ ಹಿಂದೂ ಸಮಾಜವು ಹೆಂಡ, ದನದ ಬಾಡಿನಲ್ಲಿ ಸುಲಿಗೆ ಅಂಶವನ್ನು ಅಗೋಚರವಾಗಿ ಅಳವಡಿಸಿದೆ. ಹೆಂಡ, ದನದ ಬಾಡು ನಮ್ಮ ಜನರ ಮಿದುಳನ್ನೇ ನಾಶ ಮಾಡಿ, ಅವರಿಗೆ ಅವರ ಸ್ಥಿತಿಯ ಅರಿವೇ ಉಂಟಾಗದಂತೆ ಮಾಡಿರುವಂಥ ಪರಿಸ್ಥಿತಿಯಲ್ಲಿ ಹೆಂಡವನ್ನು ಕುಡಿಯಿರಿ ಎಂದರೆ 'ನೀವು ಇರೋ ಅವಸ್ಥೇಲೆ ನೀವಿರಿ' ಎಂದೂ ಹೇಳಿದಂತಾಗುತ್ತದೆ. ಆದ್ದರಿಂದ ಹೆಂಡ, ದನದ ಬಾಡು ನಮ್ಮ ಪಾಲಿಗೆ ಅವಮಾನಕಾರವಾದ ದುಃಸ್ವಪ್ನ. ನಮ್ಮ ಜನರ ತಲೆಯನ್ನು ಸಾಮೂಹಿಕವಾಗಿ ಕತ್ತರಿಸಿ ಸುಲಿಗೆ ಮಾಡಲು ಅನುಕೂಲಕರವಾಗಿರುವ ಸಂಚು. ಇಂಥದೇ ಸಂಚು ಚೈನಾದ ಸೈನಿಕರ ಶೌರ್ಯವನ್ನು ಹಾಳು ಮಾಡಲು ಅವರ ವಿರೋಧಿಗಳು ಚೈನಾದ ಸೈನ್ಯಕ್ಕೆ ಜನತೆಗೆ ಅಫೀಮು ಸೇವಿಸುವ ರೂಢಿ ಮಾಡಿದ್ದನ್ನು ನೆನಪಿಸಿಕೊಳ್ಳಬಹುದು. ನಮ್ಮ ದುರ್ಬಲತೆಯೇ ಸುಲಿಗೆದಾರರ ಪ್ರಭಲತೆಯೂ ಆಗುತ್ತದೆ.

ಹಾಗಾದರೆ ಏನು ಮಾಡೋಣ? ಹೆಂಡ ತಪ್ಪೆ? ಇಲ್ಲ, ದನದ ಬಾಡು ತಪ್ಪೆ? ಇಲ್ಲ, ಏನು ತಪ್ಪು? ಹೆಂಡ ದನದ ಬಾಡಿನಲ್ಲಿ ಅಡಕವಾಗಿರುವ ಸುಲಿಗೆ ತಪ್ಪು. ಹೆಂಡ, ದನದ ಬಾಡಿನಲ್ಲಿ ಅಡಕವಾಗಿರುವ ಸುಲಿಗೆ ಅಂಶ ತೆಗೆದರೆ ಮಾತ್ರ ಇವು 'ಆಹಾರ' ಆಗುತ್ತವೆ. ಈ ರೀತಿಯಾಗುವುದು ಶೋಷಣಾಮುಕ್ತ ಸಮಾಜದಲ್ಲಿ ಮಾತ್ರ. ಅಲ್ಲಿಯವರೆಗೂ ಏನು ಹೇಳೋಣ?—'ಹೆಂಡದ ಬದಲು ಬೀರು ಕುಡಿಯಿರಿ.'

—ಕಿಡಿಗೇಡಿ

### ದಲಿತರಿಗೊಂದು ಪಿಸುಮಾತು

ಪ್ರತಿಯೊಬ್ಬ ದಲಿತ ಯುವಕ-ಯುವತಿಯೂ ವಿದ್ಯಾವಂತರಾಗುವುದರೊಟ್ಟಿಗೆ ದೈಹಿಕ ಹೋರಾಟವನ್ನು ಹಸ್ತಗತ ಮಾಡಿಕೊಳ್ಳಬೇಕು. ಸಂಧಾನ ಒಪ್ಪಂದಗಳು ಬೇಡ. ಸವರ್ಣೀಯರ ಅನುಕರಣೆ ಅನಗತ್ಯ. ದಲಿತ ತನ್ನ ಪ್ರತಿ ಹೆಜ್ಜೆಯ ಸ್ಥಿತಿಯನ್ನು 'ಛಾಲೆಂಜ್' ಆಗಿ ತೆಗೆದುಕೊಳ್ಳಬೇಕು. ಮಾನಸಿಕ ಕೀಳರಿಮೆ ತೊಲಗಬೇಕು. ಆರ್ಥಿಕ ಅನುಕೂಲತೆ ಜಾತಿ ವಿನಾಶಕ್ಕೆ ಕಾರಣವಾಗುವುದಿಲ್ಲ; ಬದಲು, ಜಾತೀಯತೆಯನ್ನು ಬಲು ನಾಜೂಕು ಮಾಡಿ ಮುಸುಕಿನ ಗುದ್ದು ಕೊಡುತ್ತದೆ. ಮಾನವರಾಗಿ ಬದುಕಲು ಮಾನವೀಯತೆಗೆ ಮಾನ್ಯತೆ ಸಾಕು.

ಕೃ. ಸು. ಬಾ.


ಮೈಸೂರಿನಿಂದ ಪ್ರಕಟವಾಗುವ 'ಪಂಚಮ' ಪಾಕ್ಷಿಕ ಪ್ರತಿ ಫೆಬ್ರವರಿ ನಂತರದ ಮೊದಲ ಸಂಚಿಕೆಯಲ್ಲಿ ಘೋಷಿಸಬೇಕಾದ ಪತ್ರಿಕೆಯ ಮಾಲಿಕತ್ವ ಮತ್ತು ಇತರ ವಿವರಗಳು:

ಫಾರಂ 4

(ರೂಲ್ 8 ನೋಡಿ)

1. ಪ್ರಕಟಣೆಯ ಸ್ಥಳ: ಮೈಸೂರು.
2. ಪ್ರಕಟಣೆಯ ಅವಧಿ: ಹದಿನೈದು ದಿನಕೊಮ್ಮೆ
3. ಮುದ್ರಕ: ಎಚ್. ಗೋವಿಂದಯ್ಯ, ಭಾರತೀಯ ಪ್ರಜೆ.
4. ವಿಳಾಸ: ಎಚ್. ಗೋವಿಂದಯ್ಯ, 516, 15ನೇ ಮೇಯಿನ್, ಸರಸ್ವತಿಪುರಂ, ಮೈಸೂರು-9. ಭಾರತೀಯ ಪ್ರಜೆ.
5. ಸಂಪಾದಕ: ಇಂದೂಧರ ಹೊನ್ನಾಪುರ, 516 15ನೇ ಮೇಯಿನ್, ಸರಸ್ವತಿಪುರಂ, ಮೈಸೂರು-9 ಭಾರತೀಯಪ್ರಜೆ.
6. ಪತ್ರಿಕೆಯ ಮಾಲಿಕತ್ವ: ಪ್ರತಿಶತ ಒಂದು ಅಥವಾ ಒಂದಕ್ಕಿಂತ ಹೆಚ್ಚು ಷೇರು ಹೊಂದಿದವರ ಹೆಸರು ಮತ್ತು ವಿಳಾಸ:

ಎಚ್. ಗೋವಿಂದಯ್ಯ, ಇಂದೂಧರ ಹೊನ್ನಾಪುರ, ಶಿವಾಜಿಗಣೇಶನ್, ಶಿವಮಲ್ಲ ದೇವನೂರ, ರಾಮದೇವ ರಾಕೆ., 516. 15ನೇ ಮೈಯಿನ್, ಸರಸ್ವತಿಪುರಂ, ಮೈಸೂರು-9

ನಾನು, ಎಚ್. ಗೋವಿಂದಯ್ಯ, ಈ ಮೂಲಕ ಘೋಷಿಸುವುದು ಏನೆಂದರೆ, ಈ ಮೇಲ್ಕಾಣಿಸಿದ ವಿವರಗಳು ನನ್ನ ತಿಳುವಳಿಕೆ ಮತ್ತು ನಂಬಿಕೆಯನ್ವಯ ಸತ್ಯವಿರುತ್ತವೆ.

(ಸಹಿ) ಎಚ್. ಗೋವಿಂದಯ್ಯ

ತಾ|| 6-3-76 ಪ್ರಕಾಶಕ

ಚಂದಾವಿವರ:

ವಿಶೇಷ ಸಂಚಿಕೆ ಮತ್ತು ಅಂಚೆವೆಚ್ಚ ಸೇರಿ ವರ್ಷಕ್ಕೆ ರೂ. 5





ಸಂಪಾದಕ : ಇಂದೂಧರ ಹೊನ್ನಾಪುರ
ಸಹಾಯ : ಶಿವಾಜಿ ಗಣೇಶನ್
ಶಿವಮಲ್ಲ ದೇವನೂರ
ರಾಮದೇವ ರಾಕೆ
ಪ್ರಕಾಶಕ : ಎಚ್. ಗೋವಿಂದಯ್ಯ
ವಿಳಾಸ : ೫೧೬, ೧೫ನೇ ಮೇನ್
ಸರಸ್ವತಿಪುರಂ, ಮೈಸೂರು-೯
ಮುದ್ರಣ : ಆಂದೋಲನ ಮುದ್ರಣ,
ಕೆ. ಜಿ. ಕೊಪ್ಪಲು, ಮೈಸೂರು-೯